# ಕುವೆಂಪು ಅವರ ಕಾನೂರು ಹೆಗ್ಗಡತಿ ಕಾದಂಬರಿಯಲ್ಲಿ ಕುಟುಂಬದ ಪ್ರತಿನಿಧೀಕರಣ.

ಒಂದು ಅಂತರ್‌ಶಿಸ್ತೀಯ ಅಧ್ಯಯನ

ಎಂ.ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯ
ಹಂಪಿ
ಇವರಿಗೆ ಸಲ್ಲಿಸಿದ ಸಂಪ್ರಬಂಧ

ಸಂಶೋಧಕ
**ಪ್ರಕಾಶ್ ಬಿ.**

ಮಾರ್ಗದರ್ಶಕ
**ಡಾ. ಕೆ.ಸಿ.ಶಿವಾರೆಡ್ಡಿ.**




**ಕುವೆಂಪು ಕನ್ನಡ ಅಧ್ಯಯನ ಕೇಂದ್ರ, ಕುಪ್ಪಳಿ**
**ಕನ್ನಡ ವಿಶ್ವವಿದ್ಯಾಲಯ, ಹಂಪಿ**
ತೀರ್ಥಹಳ್ಳಿ ತಾಲ್ಲೂಕು, ಶಿವಮೊಗ್ಗ ಜಿಲ್ಲೆ
೨೦೦೮

# ಕುವೆಂಪುರವರ ಕಾನೂರು ಹೆಗ್ಗಡತಿ ಕಾದಂಬರಿಯಲ್ಲಿ ಕುಟುಂಬದ ಪ್ರತಿನಿಧೀಕರಣ.

## ಒಂದು ಅಂತರ್‌ಶಿಸ್ತೀಯ ಅಧ್ಯಯನ

ಎಂ.ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯ

ಹಂಪಿ

ಇವರಿಗೆ ಸಲ್ಲಿಸಿದ ಪ್ರಬಂಧ




ಸಂಶೋಧಕರು

ಪ್ರಕಾಶ್ ಬಿ.

ಮಾರ್ಗದರ್ಶಕರು

ಡಾ. ಕೆ.ಸಿ.ಶಿವಾರೆಡ್ಡಿ.






ಕುವೆಂಪು ಕನ್ನಡ ಅಧ್ಯಯನ ಕೇಂದ್ರ, ಕುಪ್ಪಳಿ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ತೀರ್ಥಹಳ್ಳಿ ತಾಲ್ಲೂಕು, ಶಿವಮೊಗ್ಗ ಜಿಲ್ಲೆ

೨೦೦೮

# ದೃಢೀಕರಣ ಪತ್ರ

ಪ್ರಕಾಶ ಬಿ. ಇವರು ಕುವೆಂಪು ಅವರ ಕಾನೂರು ಹೆಗ್ಗಡತಿ ಕಾದಂಬರಿಯಲ್ಲಿ ಕುಟುಂಬದ ಪ್ರತಿನಿಧೀಕರಣ. ಒಂದು ಅಂತರ್‌ಶಿಸ್ತೀಯ ಅಧ್ಯಯನ ಎಂಬ ಶೀರ್ಷಿಕೆಯ ಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಹಂಪಿ ಕನ್ನಡ ವಿಶ್ವವಿದ್ಯಾಲಯದ ಕುವೆಂಪು ಕನ್ನಡ ಅಧ್ಯಯನ ಕೇಂದ್ರಕ್ಕೆ ಎಂ.ಫಿಲ್ ಪದವಿಗಾಗಿ ಸಲ್ಲಿಸುತ್ತಿರುವ ಈ ಸಂಪ್ರಬಂಧವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲ ಎಂದು ದೃಢೀಕರಿಸುತ್ತೇನೆ.

(ಕೆ.ಸಿ.ಶಿವಾರೆಡ್ಡಿ)
ಸಂಯೋಜಕರು,
ಕುವೆಂಪು ಕನ್ನಡ ಅಧ್ಯಯನ ಕೇಂದ್ರ
ಕುಪ್ಪಳ

ದಿನಾಂಕ : 15-09-2008
ಸ್ಥಳ : ಕುಪ್ಪಳ

# ಪ್ರಮಾಣ ಪತ್ರ

ಕುವೆಂಪು ಅವರ ಕಾನೂರು ಹೆಗ್ಗಡತಿ ಕಾದಂಬರಿಯಲ್ಲಿ ಕುಟುಂಬದ ಪ್ರತಿನಿಧೀಕರಣ ಒಂದು ಅಂತರ್‌ಶಿಸ್ತೀಯ ಅಧ್ಯಯನ ಎಂಬ ಶೀರ್ಷಿಕೆಯ ಈ ಸಂಪ್ರಬಂಧವನ್ನು ಎಂ.ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯದ ಭಾಷೆ ಮತ್ತು ಸಾಹಿತ್ಯ ನಿಕಾಯಕ್ಕೆ ಸಲ್ಲಿಸಲು ಡಾ.ಕೆ.ಸಿ.ಶಿವಾರೆಡ್ಡಿ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ.

ಪ್ರಸ್ತುತ ಪ್ರಬಂಧದ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿಗಾಗಲೀ ಅಥವಾ ಇತರ ಉದ್ದೇಶಗಳಿಗಾಗಲೀ ಬಳಸಿಕೊಂಡಿಲ್ಲ ಎಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

(ಪ್ರಕಾಶ್ ಬಿ.)
ಎಂ.ಫಿಲ್. ವಿದ್ಯಾರ್ಥಿ
ಸೊಪ್ಪುಗುಡ್ಡೆ, 5ನೇ ತಿರುವು,
ತೀರ್ಥಹಳ್ಳಿ - 577 432
ಶಿವಮೊಗ್ಗ ಜಿಲ್ಲೆ

ದಿನಾಂಕ:15-09-2008

# ಪರಿವಿಡಿ

# ಅಧ್ಯಾಯ – 1

# ಅಂತರ್‌ಶಿಸ್ತೀಯ ಅಧ್ಯಯನ

## ಪ್ರಸ್ತಾವನೆ

ಇತ್ತೀಚಿನ ದಿನಗಳ ಅಂತರ್‌ಶಿಸ್ತೀಯ ಅಧ್ಯಯನ ಮುಖ್ಯವಾಗಿ ಕೇಳಿ ಬರುವ ಅಧ್ಯಯನ ಪರಿಭಾಷೆಯಾಗಿದೆ. ಇದು ಜ್ಞಾನವನ್ನು ಹೇಗೆ ಸಂಘಟಿಸಬೇಕು ಮತ್ತು ಹೇಗೆ ಬಳಸಿಕೊಳ್ಳಬೇಕು ಎಂಬುದರ ಬಗ್ಗೆ ವಿರಳವಾಗಿ ಬೋಧಕ್ಕೆ ಒಳಪಡುತ್ತಿದೆ.

Alan Lice ಪ್ರಕಾರ "ಅಂತರ್‌ಶಿಸ್ತೀಯ ಅಧ್ಯಯನವು ಬಹಳ ಗಂಭೀರವಾಗಿ, ವಿಮರ್ಶಾತ್ಮಕವಾಗಿ, ಸಾಂಸ್ಥಿಕವಾಗಿ ಮತ್ತು ಬೋಧಕ ಪರಿಕಲ್ಪನೆಯಾಗಿ ಆಧುನಿಕ ಶಿಕ್ಷಣದಲ್ಲಿ ಬಳಸಲಾಗುತ್ತಿದೆ" ಎಂದಿದ್ದಾರೆ.

'ಅಂತರ್‌ಶಿಸ್ತೀಯ' ಎಂಬ ಪರಿಕಲ್ಪನೆಯ ಬಗ್ಗೆ ಹಲವು ವ್ಯಾಖ್ಯಾನಗಳಿದ್ದು, ಜೋ.ಮಾರನ್‌ರವರು ಬರೆದಿರುವ INTERDISCIPLINARITY ಎಂಬ ಪುಸ್ತಕವು ಹಲವು ನಿರ್ದಿಷ್ಟ ಗುರಿಗಳನ್ನು ಹೊಂದಿದ್ದು, ಸಾಹಿತ್ಯ ಅಧ್ಯಯನ ಕ್ಷೇತ್ರದಲ್ಲಿ ಅಂತರ್‌ಶಿಸ್ತೀಯ ದೃಷ್ಟಿಕೋನವು ಇತರೆ ಕ್ಷೇತ್ರಗಳಾದ ಸಾಂಸ್ಕೃತಿಕ ಅಧ್ಯಯನ, ಸಮಾಜ ಶಾಸ್ತ್ರ, ಮಾನವಶಾಸ್ತ್ರ, ತತ್ವಶಾಸ್ತ್ರ, ಭೋಗೋಳಶಾಸ್ತ್ರ ಮತ್ತು ಮಾನವಿಕ ಅಧ್ಯಯನಗಳನ್ನು, ವಿಜ್ಞಾನ ವಿದ್ಯಾರ್ಥಿಗಳಿಗೆ ಪರಿಚಯಿಸುವ ಉದ್ದೇಶ ಹೊಂದಿದೆ. ಅಂತರ್‌ಶಿಸ್ತೀಯ ಅಧ್ಯಯನವು ಇತರ ವಿಷಯಗಳೊಂದಿಗೆ ಸಂಬಂಧ ಹೊಂದಿರುವುದರಿಂದ ಅಸ್ತಿತ್ವದಲ್ಲಿರುವ ಅಧ್ಯಯನ ಶಿಸ್ತುಗಳನ್ನು ಪರೀಕ್ಷಾತ್ಮಕವಾಗಿ ನೋಡದೆ ಅರ್ಥೈಸಲಾಗುವುದಿಲ್ಲ. ಅಲ್ಲದೆ ಇದು ಎರಡು ಆಧುನಿಕ ಅರ್ಥಗಳನ್ನು ಹೊಂದಿದೆ. ಅವುಗಳೆಂದರೆ ಮೊದಲನೆಯದಾಗಿ ನಿರ್ದಿಷ್ಟ ಜ್ಞಾನ ಕ್ಷೇತ್ರಕ್ಕೆ ಅನ್ವಯಿಸುತ್ತದೆ. ಎರಡನೆಯದಾಗಿ ತಮ್ಮ ಅಧೀನದಲ್ಲಿರುವ ದೈಹಿಕ ರೀತಿಯ (ಸೈನಿಕರು, ಕೈದಿಗಳು- ಸಹಪಾಠಿ ಅಥವಾ ಶಾಲಾ ವಿದ್ಯಾರ್ಥಿಗಳು) ಶಿಕ್ಷಣಗಳ ಮೂಲಕ ಆಜ್ಞಾಪಾಲನೆ ಮಾಡುವುದು.

INTERDISCIPLINARITY ಎಂಬ ಪದವು Disiplina ಎನ್ನುವ ಲ್ಯಾಟಿನ್ ಭಾಷೆಯಿಂದ ಉತ್ಪತ್ತಿಯಾಗಿದೆ. ಇದರ ಅರ್ಥವು ಹಿರಿಯರು, ಕಿರಿಯರಿಗೆ ಮತ್ತು ವಿದ್ಯಾರ್ಥಿಗಳಿಗೆ ಸೂಚನೆ ಕೊಡುವುದು ಎಂದಾಗಿದೆ. ಆಕ್ಸ್‌ಫರ್ಡ್ ಶಬ್ದಕೋಶದಲ್ಲಿ ಸೂಚಿಸಿದಂತೆ ಈ ಪದದ

ಅರ್ಥವನ್ನು 'ವಿದ್ಯಾರ್ಥಿಗಳಿಗೆ ಕೊಡುವ ನಿರ್ದಿಷ್ಟ ಶಿಕ್ಷಣ ಪದ್ಧತಿ" ಎಂದಿದೆ. ಈ ಪದವು Disciplina of Secret ಎಂಬ ಪದ ಸಮೂಹಕ್ಕೆ ಸಂಬಂಧಿಸಿದೆ. ಈ ಪದವನ್ನು 16ನೇ ಶತಮಾನದಲ್ಲಿ ಪ್ರೊಟೆಸ್ಟೆಂಟ್ ಚರ್ಚ್‌ಗಳಲ್ಲಿ ಮತಾಂತರಗೊಂಡವರನ್ನು ನಾಸ್ತಿಕರಿಂದ ಬೇರ್ಪಡಿಸಲು ಬಳಸಲಾಗುತ್ತಿತ್ತು. ಅಲ್ಲಿ Disciplina ಎಂಬ ಪದವನ್ನು ಜ್ಞಾನ ಮತ್ತು ಶಕ್ತಿಯ ಮಧ್ಯ ಇರುವ ಸಂಬಂಧವನ್ನು ಪ್ರಶ್ನಿಸುವಲ್ಲಿ ಉಪಯೋಗಿಸಲ್ಪಟ್ಟಿತು. ಅಂತರ್‌ಶಿಸ್ತೀಯವನ್ನು ನಾಮಪದವಾಗಿ ಬಳಸಿದಾಗ, ಒಂದು ಸಂಬಂಧದ ಬಗ್ಗೆ ವಿಮರ್ಶಾತ್ಮಕ ಪ್ರಜ್ಞೆಯನ್ನು ಮೂಡಿಸುತ್ತದೆ ಎಂದು ಸೂಚಿಸಲಾಯಿತು.

## ಅಂತರ್‌ಶಿಸ್ತೀಯ ಅಧ್ಯಯನದ ಅರ್ಥ

ಅಂತರ್‌ಶಿಸ್ತೀಯ ಎಂಬ ಪದವು ಸಾಮಾನ್ಯ ಶಿಕ್ಷಣ ರೂಪದ ಅವನತಿಯಿಂದ ವ್ಯಾಕುಲತೆಗೊಂಡು ಅಸ್ತಿತ್ವಕ್ಕೆ ಬಂದಿದ್ದು, 1920ರ ಮಧ್ಯಭಾಗದಲ್ಲಿ ಹಾಗೂ ಎರಡನೇ ಮಹಾಯುದ್ಧದ ನಂತರ ಸಮಾಜ ವಿಜ್ಞಾನ ಮತ್ತು ಮಾನವಿಕ ವಿಜ್ಞಾನಗಳಲ್ಲಿ ಸಾಮಾನ್ಯ ಬದಲಾವಣೆಯ ವಿಷಯವಾಗಿ ಬಳಸಲಾಯಿತು. ಅಂತರ್‌ಶಿಸ್ತೀಯವು ಇತರ ಜ್ಞಾನಶಾಸ್ತ್ರದೊಂದಿಗೆ ಆಂತರಿಕ ಸಂಬಂಧ ಹೊಂದಿದೆ.

ಅಸ್ತಿತ್ವದಲ್ಲಿರುವ ಯಾವುದೇ ಸಮಸ್ಯೆಯನ್ನು ಉಲ್ಲೇಖಿಸುವುದು ಅಥವಾ ಸಮಸ್ಯೆಯನ್ನು ಕೇಂದ್ರವಾಗಿಟ್ಟುಕೊಂಡು ಅಧ್ಯಯನ ಮಾಡಿ ಪರಿಹರಿಸುವುದು ಈ ಅಂತರ್‌ಶಿಸ್ತೀಯ ಅಧ್ಯಯನದ ಉದ್ದೇಶವಾಗಿದೆ. ಜೀಯಾಫ್ರೆ ಬೆನ್ನಿಂಗ್‌ಟನ್ ಸೂಚಿಸುವಂತೆ 'inter" ಎಂಬ ಪದವು ಪರಸ್ಪರ ವ್ಯವಹಾರ ಹೊಂದಿರುವ ಮತ್ತು ಬೇರ್ಪಡಿಸುವ ಉದ್ದೇಶದಿಂದ ಆ ಎರಡು ವಿಷಯವಸ್ತುಗಳ ನಡುವೆ ಸಂಪರ್ಕ ಮತ್ತು ಹೊಂದಾಣಿಕೆ ಸಾಧಿಸುವುದಾಗಿದೆ. ಇಲ್ಲಿ ಅಂತರ್‌ಶಿಸ್ತೀಯ ಎನ್ನುವ ಪದ ಸಂದೇಹಾರ್ಥವಾದ ಭಾಗವನ್ನು ಪ್ರತಿಫಲಿಸುತ್ತದೆ. ಆದರೆ ಅಧ್ಯಯನ ಶಿಸ್ತುಗಳ ನಡುವೆ ಆಸಕ್ತಿಕರವಾದ ಅಂತರವನ್ನು ಅಧ್ಯಯನ ಶಿಸ್ತೀಯವಲ್ಲದ ವಿಷಯಗಳ ಅರ್ಥವನ್ನು ಅಸ್ತಿತ್ವಗೊಳಿಸುವುದು ಎಂದು ಅರ್ಥೈಸಬಹುದು.

ಆದರೆ ಅಂತರ್‌ಶಿಸ್ತೀಯ ಎನ್ನುವದೇ ಅಂತಿಮವಲ್ಲ. ಅದು ಯಾವಾಗಲೂ ಬದಲಾಗುತ್ತಿದ್ದು ಇನ್ನೊಂದು ಬೌದ್ಧಿಕ ಹಂತದ ಅಧ್ಯಯನ ವಿಧಾನಗಳ ವಿಭಾಗೀಕರಣವನ್ನು ಆಮೂಲಾಗ್ರವಾಗಿ ನಾಶಮಾಡುವುದು. ಸಂಪ್ರದಾಯಸ್ತವಾದ ಅಧ್ಯಯನ ವಿಧಾನದಲ್ಲಿ ಮತ್ತು ತಾತ್ವಿಕವಾಗಿ Disciplina ಎನ್ನುವ ಪದಕ್ಕೆ ಮಿತಿಯನ್ನು ಕಲ್ಪಿಸಬಹುದು. ಈ ಶಬ್ಧಕ್ಕೆ ವಿಶಾಲವಾದ ಅರ್ಥವನ್ನು ಕಲ್ಪಿಸಲು ಸಾಧ್ಯವಾದರೆ ಎರಡು ಅಥವಾ ಎರಡಕ್ಕಿಂತ ಹೆಚ್ಚು ಅಧ್ಯಯನ ವಿಧಾನಗಳ ನಡುವೆ ಅಂತರ್‌ಕ್ರಿಯೆಯನ್ನು ಅಥವಾ ಸಂಭಾಷಣೆಯ ಅರ್ಥದಲ್ಲಿ ಅಂತರ್‌ಕ್ರಿಯೆಯನ್ನು ಅಥವಾ ಸಂಭಾಷಣೆಯ ಅರ್ಥದಲ್ಲಿ ಅಂತರ್‌ಶಿಸ್ತೀಯ ಪದವನ್ನು ತೆಗೆದುಕೊಳ್ಳಬಹುದು. ಕಲಾ ವಿಭಾಗದ ವಿವಿಧ ಅಧ್ಯಯನ ಶಿಸ್ತುಗಳನ್ನು ಬೋಧಿಸುವ ಉಪನ್ಯಾಸಕರು ಎರಡು ಅಥವಾ ಎರಡಕ್ಕಿಂತ ಹೆಚ್ಚು. ಶಿಸ್ತುಗಳನ್ನು ಅಕ್ಕಪಕ್ಕದಲ್ಲಿಟ್ಟು ಅಭ್ಯಾಸಿಸಲು

ಉದ್ದೇಶಿಸಿದರು. ಆ ಮೂಲಕ ಒಂದೆಡೆ ಸೇರಿ ಚಿಂತಿಸಿ ಒಟ್ಟಾಗಿ ಗೌರವಿಸುವುದನ್ನು ಕಲಿತರು. ಇಲ್ಲಿ ಅತಿ ಸಾಮಿಪ್ಯದ ಅಧ್ಯಯನ ಶಿಸ್ತುಗಳ ನಡುವಿನ ಸಂಬಂಧವನ್ನು ಅವುಗಳ ನಡುವೆ ಭಾವೈಕ್ಯತೆಯನ್ನು ಕಾಣಲಾಯಿತು.

Barthes ಸಲಹೆ ನೀಡುವಂತೆ ಅಂತರ್‌ಶಿಸ್ತೀಯವು ಸರಳವಾಗಿ ವಿಭಿನ್ನ ಅಧ್ಯಯನ ಶಿಸ್ತುಗಳನ್ನು ಒಟ್ಟು ಸೇರಿಸುವ ಸಾಮರ್ಥ್ಯ ಹೊಂದಿದೆ ಎಂದಿದ್ದಾರೆ. ಅಂತರ್‌ಶಿಸ್ತೀಯ ಎಂಬ ಪದದ ಕಲ್ಪನೆಯು ಸಾಂಸ್ಥಿಕ ಆಚರಣೆಗಳ ಮತ್ತು ಅಧ್ಯಯನ ಶಿಸ್ತುಗಳು ಚಿಂತಿಸುವ ಕ್ರಮದ ಸಂಬಂಧವಾಗಿ ಅಸ್ತಿತ್ವಕ್ಕೆ ಬಂದಿದೆ ಎನ್ನಬಹುದು. ವಿಶ್ವವಿದ್ಯಾಲಯಗಳ ವಿದ್ಯಾರ್ಥಿಗಳು ಇಂದು ಸಮಾಜವಿಜ್ಞಾನ ಮತ್ತು ಮಾನವಿಕ ಶಾಸ್ತ್ರಗಳನ್ನು ಮಾದರಿಯಾಗಿ ಆಯ್ಕೆ ಮಾಡಿಕೊಂಡು ಅಧ್ಯಯನ ನಡೆಸಿದಾಗ ಅವುಗಳ ನಡುವೆ ಅಧ್ಯಯನ ವಿಷಯದ ವ್ಯಾಪ್ತಿಯ ಪ್ರಮಾಣ ಸಿದ್ಧಾಂತಗಳ ಪ್ರತಿರೂಪ. ಸಾಮಾನ್ಯ ಜ್ಞಾನದ ಚೌಕಟ್ಟು ಪಠ್ಯ ಮತ್ತು ಪದಜ್ಞಾನದ ಸಂಬಂಧಗಳು ಆಶ್ಚರ್ಯ ಮೂಡಿಸುತ್ತದೆ.

ಹಿಂದೆ ಒಬ್ಬ ಸಾಹಿತಿ ತನ್ನ ಕೃತಿಯನ್ನು ರಚನೆ ಮಾಡುವ ಸಂದರ್ಭದಲ್ಲಿ ಹಲವು ಪಾತ್ರಗಳನ್ನು ನಿರ್ವಹಿಸುತ್ತಿದ್ದ. ಅಂದರೆ ಆತ ಸಮಾಜಶಾಸ್ತ್ರಜ್ಞನಾಗಿ, ಮನೋವಿಜ್ಞಾನಿಯಾಗಿ, ತತ್ವಜ್ಞಾನಿಯಾಗಿ ಆತ ಸ್ವತಃ ಪ್ರಶ್ನೆಗಳನ್ನು ಸೃಷ್ಟಿಸುತ್ತಾ, ಅದಕ್ಕೆ ಉತ್ತರಗಳನ್ನು ಹುಡುಕುತ್ತಾ ಸಮಾಜಕ್ಕೆ ತನ್ಮೂಲಕ ಹೊಸ ಸಂದೇಶ ನೀಡುವ ಪ್ರಯತ್ನ ಮಾಡುತ್ತಿದ್ದ. ಆದರೆ ಇಂದು ಹಾಗಲ್ಲ. ಒಬ್ಬ ಸಮಾಜಶಾಸ್ತ್ರಜ್ಞ – ಮನೋ ವಿಜ್ಞಾನಿ, ತತ್ವಜ್ಞಾನಿ ತಾನು ಕ್ಷೇತ್ರ ಅಧ್ಯಯನಗಳ ಮೂಲಕ ಕಂಡುಕೊಂಡ ಸತ್ಯ ಸಂಗತಿಗಳನ್ನು ಸಾಹಿತ್ಯದ ಮುಖಾಂತರ ಸಮಾಜಕ್ಕೆ ನೀಡುವ ಪ್ರಯತ್ನ ಮಾಡುತ್ತಿದ್ದಾರೆ. ಅದರಿಂದಲೇ ಇಂದು ಅಂತರ್‌ಶಿಸ್ತೀಯ ಅಧ್ಯಯನ ಎಂಬ ಪರಿಕಲ್ಪನೆ ಚಾಲ್ತಿಯಲ್ಲಿರಲು ಕಾರಣವಾಗಿದೆ. ಈ ಪುಸ್ತಕದಲ್ಲಿಯೂ ಸಮಾಜಶಾಸ್ತ್ರೀಯ ದೃಷ್ಟಿಕೋನದ ಮೂಲಕ, ಸಾಹಿತ್ಯದಲ್ಲಿ ಅಡಗಿರುವ ಸತ್ಯ ಸಂಗತಿಗಳನ್ನು ಸಮಾಜ ಎಂಬ ಜಗತ್ತಿಗೆ ತೋರಿಸುವ ಪ್ರಯತ್ನ ಇಲ್ಲಿ ಸಾಗಿದೆ.

ಕುವೆಂಪು ಅವರ ಕಾನೂರು ಹೆಗ್ಗಡತಿ ಎಂಬ ಕಾದಂಬರಿ ಒಂದು ಸಮಾಜದಲ್ಲಿ ವಾಸವಾಗಿರುವ ಹಲವು ಜಾತಿಗಳ, ವರ್ಗಗಳ ಬಗ್ಗೆ ಮಾಹಿತಿ ನೀಡುವ ಪುಟ್ಟ ಪ್ರಪಂಚ. ಈ ಕಾದಂಬರಿ ಎಂಬ ಮಾಯಾಲೋಕದ ಬಾಗಿಲು ತೆರೆಯುತ್ತಿದ್ದಂತೆ. ನಮಗೆ ಹೊಸ, ಹೊಸ ಆಯಾಮ, ದೃಷ್ಟಿಕೋನ, ಯೋಚನಾ ಲಹರಿ ಅದರಲ್ಲಿ ಸುಪ್ತವಾಗಿ ಅಡಗಿರುವ ಸಂದೇಶ, ಯಾರನ್ನು ಹೆಚ್ಚುಗಾರಿಕೆ ಮಾಡದೆ, ಯಾರನ್ನು ಕಡೆಗಣಿಸದೆ, ಒಂದೊಂದು ಪುಟ್ಟ ಪಾತ್ರಗಳಗೂ ನ್ಯಾಯ ಒದಗಿಸಿದ ರೀತಿ ಆ ಪಾತ್ರ ಹುಟ್ಟಿಕೊಳ್ಳುವುದು, ಕೊನೆಯಾಗುವುದು ಇವೆಲ್ಲವೂ ಒಂದು ವಿಸ್ಮಯ ಲೋಕವನ್ನೇ ಸೃಷ್ಟಿಸುತ್ತದೆ. ಅದನ್ನೆಲ್ಲಾ ಸಮಾಜಶಾಸ್ತ್ರೀಯವಾಗಿ ಅಂತರ್‌ಶಿಸ್ತೀಯ ಅಧ್ಯಯನದ ಮೂಲಕ ಅಭ್ಯಸಿಸಲಾಗುತ್ತದೆ.

# ವ್ಯಾಖ್ಯೆ ಮತ್ತು ಉಗಮ

ಜ್ಞಾನವನ್ನು ಅಧ್ಯಯನ ವಿಧಾನವಾಗಿ ರೂಪುಗೊಳಿಸುವ ಆಲೋಚನೆಯನ್ನು ಗ್ರೀಕ್ ತತ್ವಶಾಸ್ತ್ರದಷ್ಟು ಹಿಂದೆಯೇ ಗುರುತಿಸಿದ್ದಾರೆ. ಉದಾಹರಣೆಗೆ ಅರಿಸ್ಟಾಟಲ್ ವಿವಿಧ ವಿಷಯಗಳನ್ನು ಪ್ರಾಯೋಗಿಕವಾಗಿ ಮತ್ತು ತಾತ್ವಿಕವಾಗಿ, ಸ್ತರ ಆಧಾರಿತವಾಗಿ ಸಂಘಟಿಸಿದ್ದನು. ತಾತ್ವಿಕ ಅಧ್ಯಯನ ವಿಷಯಗಳಿಗೆ ಜ್ಞಾನದಲ್ಲಿ ಮೊದಲನೆ ಸ್ಥಾನವನ್ನು ನೀಡಿದ್ದನು. ಅದರಲ್ಲಿ ಧರ್ಮಶಾಸ್ತ್ರ, ಗಣಿತಶಾಸ್ತ್ರ, ಭೌತಶಾಸ್ತ್ರ ಮುಂತಾದವುಗಳಿದ್ದವು. ಮಧ್ಯಮ ಕ್ರಮಾಂಕದಲ್ಲಿ ಪ್ರಾಯೋಗಿಕ ಅಧ್ಯಯನ ಶಾಸ್ತ್ರಗಳಾದ ನೀತಿಶಾಸ್ತ್ರ & ರಾಜ್ಯಶಾಸ್ತ್ರಗಳಿದ್ದರೆ ಕೆಳ ಹಂತದಲ್ಲಿ ಲಲಿತ ಕಲೆ, ಕವನ, ತಾಂತ್ರಿಕ ವಿಷಯಗಳಿದ್ದವು.

ಅರಿಸ್ಟಾಟಲ್ ಅಧ್ಯಯನ ವಿಧಾನಗಳಿಗೆ ಎರಡು ಮಾರ್ಗದರ್ಶಕ ತತ್ವವನ್ನು ಬಳಸಿದನು. ಮೊದಲನೆಯದಾಗಿ ವಿವಿಧ ವಿಷಯಗಳ ನಡುವೆ ಸ್ಪಷ್ಟವಾದ ಸ್ಥರವಿನ್ಯಾಸ ಸ್ಥಾಪನೆ. ಎರಡನೆಯದಾಗಿ ತತ್ವಜ್ಞಾನದ ಆಧಾರದ ಮೇಲೆ ಉಳಿದೆಲ್ಲಾ ವಿಷಯಗಳು ಅದರಲ್ಲಿಯೇ ಅಡಗಿವೆ ಎಂಬುದನ್ನು ಗುರುತಿಸಿದನು. ಯೂರೋಪಿನ ಸಮಾಜಗಳಲ್ಲಿ ಈ ಅಧ್ಯಯನ ವಿಷಯಗಳನ್ನು ವಿಶ್ವವಿದ್ಯಾಲಯಗಳು ಅನುಸರಿಸುತ್ತಿವೆ. 18ನೇ ಶತಮಾನದ ಅಂತ್ಯದಲ್ಲಿ ವಿಶ್ವವಿದ್ಯಾಲಯಗಳು ಕಲಾ ವಿಭಾಗದ ಪಠ್ಯಗಳನ್ನು ಪ್ರಾಥಮಿಕ ಪಠ್ಯತ್ರಯಗಳೆಂದು, ಇದರಲ್ಲಿ ತತ್ವಶಾಸ್ತ್ರ, ವ್ಯಾಕರಣ ಶಾಸ್ತ್ರ ಮತ್ತು ಅಲಂಕಾರಶಾಸ್ತ್ರಗಳಿದ್ದರೆ ಹಾಗೂ ಪಠ್ಯ ಚತುಷ್ಕಗಳೆಂಬ ಈ ಭಾಗದಲ್ಲಿ ಅಂಕಗಣಿತ, ರೇಖಾಗಣಿತ, ಖಗೋಳ ಶಾಸ್ತ್ರ ಮತ್ತು ಸಂಗೀತವನ್ನು ಅಧ್ಯಯನ ಮಾಡುವ ವಿಧಾನಗಳಿದ್ದವು.

ಈ ಮೇಲಿನ ಅಧ್ಯಯನ ವಿಧಾನಗಳ ನಂತರವಷ್ಟೆ ನಿರ್ದಿಷ್ಟ ವಿಷಯಗಳಾದ ವೈದ್ಯಕೀಯ, ಕಾನೂನು ಮತ್ತು ನೀತಿಶಾಸ್ತ್ರ ವಿಷಯಗಳಲ್ಲಿ ಪರಿಣಿತಿ ಪಡೆಯಲು ಆಯ್ಕೆ ಮಾಡಿಕೊಳ್ಳುತ್ತಿದ್ದರು. ಸಮಾಜದಲ್ಲಿ ಅಧ್ಯಯನ ವಿಷಯಗಳ ಬೆಳವಣಿಗೆ ಆಗುತ್ತಿದ್ದಂತೆ ಅವುಗಳಿಗೆ ಒಂದೊಂದು ಅಧ್ಯಯನ ಚೌಕಟ್ಟನ್ನು ನಿಗದಿಪಡಿಸುವುದು ಸಮುದಾಯಗಳಿಗೆ ಅವಶ್ಯ ಎಂದು ತಿಳಿದು University ಹುಟ್ಟು ಹಾಕಿದರು. ತತ್ವಶಾಸ್ತ್ರಜ್ಞರ ಪ್ರಯತ್ನದ ಕಾರಣವಾಗಿ ಎಲ್ಲಾ ಅಧ್ಯಯನ ವಿಷಯಗಳಿಗೆ ಒಂದು ಶಿಸ್ತು ಮತ್ತು ಕಲಿಕೆಯಲ್ಲಿ ವಿಶೇಷತೆಯನ್ನು ಸ್ಪಷ್ಟವಾಗಿಸಿ ವಿಜ್ಞಾನ ಮತ್ತು ಗಣಿತ ಶಾಸ್ತ್ರದಲ್ಲಿ ಬಳಸಲು ಪ್ರಾರಂಭಿಸಿದರು.

ಜ್ಞಾನೋದಯ ಚಿಂತನೆಯು ವೈಜ್ಞಾನಿಕ ಕ್ರಾಂತಿಯನ್ನು ಉಂಟು ಮಾಡಿತು. ಆಗ ವಿಜ್ಞಾನಿಗಳಾದ ಕೋಪರ್‌ನಿಕಸ್, ಕೆಪ್ಲರ್, ಗೆಲಿಲಿಯೋ ಮತ್ತು ನ್ಯೂಟನ್ ಮುಂತಾದವರು ಗ್ರೀಕ್‌ನಲ್ಲಿ ಸ್ವಾಭಾವಿಕ ಕ್ರಮಗಳನ್ನು ಬೆಳಕಿಗೆ ತಂದರು. ಇದರಿಂದ ಪ್ರಕೃತಿಯನ್ನು ನೋಡುವ ದೃಷ್ಟಿಯು ಬದಲಾಯಿತು. ಮಾನವನಿಗಾಗಿ ಒಂದು ಸಣ್ಣ ಪ್ರಮಾಣದ ಸಾರ್ವತ್ರಿಕ ನಿಯಮವನ್ನು ಜಾರಿಗೆ ತಂದರು. ಇದರ ಮೂಲಕ ಇಂದ್ರಿಯ ಜನ್ಯಜ್ಞಾನಗಳಲ್ಲಿ ಅಭಿವೃದ್ಧಿಯಾಗಿ ಸಮಸ್ಯೆಗಳನ್ನು ಬಗೆಹರಿಸಿಕೊಳ್ಳಲು ಸಹಾಯವಾಯಿತು. ಹೊಸ ಪ್ರಯೋಗಾತ್ಮಕ ಸಾಧನಗಳಾದ ಉಷ್ಣಮಾಪಕ, ಸೂಕ್ಷ್ಮದರ್ಶಕ ಸಾಧನಗಳು ಚಾಲನೆಗೆ ಬಂದು ಸಮಸ್ಯೆ ಬಗೆಹರಿಸಿಕೊಳ್ಳಲು ನಿರ್ದಿಷ್ಟ ಮಾದರಿ ಅನುಸರಿಸಿದರು.

ಬೌದ್ಧಿಕ ಬೆಳವಣಿಗೆಯು ಮಾಹಿತಿಯನ್ನು ಕಲೆಹಾಕುವ ಕ್ಷೇತ್ರದಲ್ಲಿ ಜ್ಞಾನೋದಯವನ್ನುಂಟು ಮಾಡಿತು. ವಿಜ್ಞಾನಿಗಳು ತಾವು ಕಲೆಹಾಕಿದ ಮಾಹಿತಿಗಳನ್ನು ವರ್ಗೀಕರಣಗೊಳಸಲಾಯಿತು. ಮಾಥ್ಯೂಸ್ ಮಾರ್ಟಿನಿರವರ ಊಹೆಯಾದ Methodica-1906, ಫ್ರಾನ್ಸಿಸ್ ಬೇಕಾನ್‌ರವರ Unfinished Instauratio Magna Scientiarum ಎಂಬ ಪುಸ್ತಕದ ವಿಜ್ಞಾನ, ಕಲೆ ಮತ್ತು ಎಲ್ಲಾ ಮಾನವ ಜ್ಞಾನಶಾಸ್ತ್ರಗಳನ್ನು ಪುನರ್‌ಸಂಘಟಿಸುವ ನಿರ್ಧಿಷ್ಠ ತಳಪಾಯವಾಯಿತು. 18ನೇ ಶತಮಾನದಲ್ಲಿ ಯೂರೋಪಿನ ಲ್ಯಾಟೀನೇತರ ಭಾಷೆಗಳ ವಿಶ್ವಕೋಶಗಳು ಹೊಸ ಜ್ಞಾನ ಶಾಖೆಗಳನ್ನು ಹಲವು ವರ್ಗಗಳಾಗಿ ಮಾಡಿ ಅವುಗಳಿಗೆ ಸಂಕೇತೀಕರಣ ಮಾಡುವ ಕಡೆ ಬೆಳಕು ಹರಿಸಿದವು. ಇದರೊಂದಿಗೆ ವಿಶ್ವಕೋಶಗಳು ಹಲವು ಈತಿಯ ಜ್ಞಾನಶಾಖೆಗಳತ್ತ ಬೆಳಕು ಹರಿಸಿದವು. ಇದರಿಂದ ಅಧ್ಯಯನ ವಿಷಯಗಳ ನಡುವೆ ಇರುವ ಸಂಬಂಧ ಮತ್ತು ನಾಮಾವಳಿಯನ್ನು ವ್ಯವಸ್ಥೆಗೊಳಿಸುತ್ತಾ ಸಾಗಿದವು. ಇದರಲ್ಲಿ 1751ರಲ್ಲಿ ವಿಶ್ವಕೋಶದ ಮೊದಲ ಕೃತಿಯನ್ನು ಜಾನ್.ಡಿ.ಅಲ್‌ಬರ್ಟ್ ಬಿಡುಗಡೆ ಮಾಡಿದನು.

ವಿಕೋ ಹೇಳುವಂತೆ "ಜ್ಞಾನಶಾಖೆಗಳು ಯಾವಾಗಲೂ ಮಾನವನಿಂದ ರಚಿಸಲ್ಪಟ್ಟಿದೆ. ಮಾನವಿಕ ವಿಜ್ಞಾನಗಳಾದ ಇತಿಹಾಸ, ತತ್ವಶಾಸ್ತ್ರ ಮತ್ತು ಕಾನೂನುಗಳು ಮಾನವ ಸಮಾಜದೊಂದಿಗೆ ವಿಶೇಷ ಆಸಕ್ತಿ ಹೊಂದಿದೆ. ಅವುಗಳನ್ನು ದೃಷ್ಠಿಯಲ್ಲಿಟ್ಟುಕೊಂಡು ನಿಸರ್ಗದಲ್ಲಿ ಜರುಗುವ ಘಟನಾವಳಿಗಳನ್ನು ಅರ್ಥೈಸುತ್ತದೆ" ಎಂದಿದ್ದಾನೆ.

ಅಂತರ್‌ಶಿಸ್ತೀಯ ಅಧ್ಯಯನವು ವಿಜ್ಞಾನಗಳ ಪೂರ್ವಕಾಲದಲ್ಲಿ ಉಂಟಾದ ಮಾನವನ ಸವಾಲುಗಳನ್ನು ಎದುರಿಸಲು ತನ್ನ ಉದ್ದೇಶಿತ ಜ್ಞಾನದ ಮೂಲಕ ತನಿಖೆ ನಡೆಸಿ ಸತ್ಯ ವಿಷಯಗಳನ್ನು ಅರಿತುಕೊಳ್ಳಲು ಪ್ರಯತ್ನಿಸಿದನು. 19ನೇ ಶತಮಾನದವರೆಗೂ ಅರಿಸ್ಟಾಟಲ್‌ನ ತತ್ವಶಾಸ್ತ್ರದ ದೃಷ್ಠಿಕೋನದಲ್ಲಿಯೇ ಅಧ್ಯಯನ ಶಿಸ್ತುಗಳ ಸಂಬಂಧವನ್ನು ಹಾಗೂ ವಿಶೇಷ ಜ್ಞಾನ ಶಾಖೆಗಳನ್ನು ಕಾಣಲಾಗುತ್ತಿತ್ತು. ಇದರಲ್ಲಿ ಮನಃಶಾಸ್ತ್ರ, ಸಮಾಜಶಾಸ್ತ್ರ, ವಿಜ್ಞಾನ ಮತ್ತು ಗಣಿತ ಶಾಸ್ತ್ರಗಳಂತಹ ಅಧ್ಯಯನ ಶಿಸ್ತುಗಳು ಕೆಲವು ಸಾವಿರ ವರ್ಷಗಳವರೆಗೂ ಹೀಗೆಯೇ ಮುಂದುವರೆಯಿತು. ಈ ತತ್ವಶಾಸ್ತ್ರವು ವಿಸ್ತೃತವಾದ ನಿರ್ದಿಷ್ಠ ಆಕಾರವಿಲ್ಲದ ವ್ಯಾಪ್ತಿಯನ್ನು ಹೊಂದಿದ್ದು ಅವುಗಳ ಚಿಂತನ ಕ್ರಮ, ಆಧಾರ ರಹಿತ ಕಲ್ಪನೆಗಳು & ಚಟುವಟಿಕೆಗಳು ಹಾಗೂ ನಿರ್ದಿಷ್ಠ ಅಧ್ಯಯನ ವಿಷಯಗಳಿಲ್ಲದೇ ಕೇವಲ ಒಂದೇ ಒಂದು ಅಧ್ಯಯನ ಶಿಸ್ತಿಗೇ ನಿರೂಪಣೆಯನ್ನು ನೀಡುತ್ತಾ ಸಾಗಿತು.

ಹೊಸ ವೈಜ್ಞಾನಿಕ ಪದ್ಧತಿಯ ಸ್ಥಾಪಕರಲ್ಲಿ ಒಬ್ಬರಾದ Rene Descarts ರವರು ತಮ್ಮ ಗ್ರಂಥವಾದ The Principles of Philosophy 1644 ಈ ಗ್ರಂಥದಲ್ಲಿ ಹೇಳಿರುವಂತೆ "ತತ್ವಶಾಸ್ತ್ರವು ಎಲ್ಲವನ್ನು ಒಳಗೊಂಡ ಒಂದು ಮರದಂತೆ. ಆ ಮರದ ಬೇರುಗಳು ಆಧ್ಯಾತ್ಮ ವಿದ್ಯೆಯಂತೆ. ಅದರ ರೆಂಬೆ ಕೊಂಬೆಗಳು ಭೌತಶಾಸ್ತ್ರದಂತೆ ಆ ರೆಂಬೆಯ ಪ್ರತೀ ಕವಲು ಹೊಸ ಇತರ ವಿಜ್ಞಾನಗಳಂತೆ" ಎಂದಿದ್ದಾರೆ.

1798ರಲ್ಲಿ ಪ್ರಕಟವಾದ ಕಾಂಟ್‌ನ ಪ್ರಬಂಧ The conflict of the Faculties ನಲ್ಲಿ ಅತಿ ಹೆಚ್ಚು ವಿವೇಚನಾ ಶಕ್ತಿಯುಳ್ಳ ಅಧ್ಯಯನ ಶಿಸ್ತುಗಳನ್ನು ವಿಭಾಗೀಕರಿಸುತ್ತದೆ. ಅದರ ಸ್ವಾಭಾವಿಕ ನೆಲೆಗಳಾದ ವಿಶ್ವವಿದ್ಯಾನಿಲಯಗಳು ಅದನ್ನು ಪುಷ್ಠೀಕರಿಸುತ್ತದೆ. ಅದರಲ್ಲಿ ಮೂರು ಮೇಲ್ಮಟ್ಟದ ವಿಜ್ಞಾನ ಶಾಖೆಗಳಾದ ನೀತಿಶಾಸ್ತ್ರ, ಕಾನೂನು ಮತ್ತು ವೈದ್ಯಕೀಯ ಶಾಸ್ತ್ರಗಳು ನಿರ್ದಿಷ್ಠ ಅಂತಃಸತ್ವಗಳಲ್ಲದೆ ಪರಸ್ಪರ ಅವಲಂಬನೆಯನ್ನು ಹೊಂದಿಲ್ಲ ಎಂದಿದ್ದಾನೆ. ಅದೇ ರೀತಿ ವಿಶ್ವ ವಿದ್ಯಾನಿಲಯಗಳು ಜ್ಞಾನ ಶಾಖೆಗಳನ್ನು ಮೇಲ್ಮಟ್ಟ ಮತ್ತು ಕೆಳಮಟ್ಟ ಎಂದು ವಿಭಾಗಿಸಿ ತತ್ವಶಾಸ್ತ್ರಗಳಿಗೆ ವಿಶೇಷ ಅಧಿಕಾರ ನೀಡಿ ಅಂತಃಸತ್ವ ಇಲ್ಲದ ಅರಚನಾತ್ಮಕ ಚಟುವಟಿಕೆಯಿಂದ ಕೂಡಿದ ಜ್ಞಾನಶಾಖೆಗಳನ್ನು ವಿಶ್ವವಿದ್ಯಾಲಯಗಳಿಂದ ದೂರವಿರಿಸಬೇಕು ಎನ್ನುತ್ತಾನೆ.

1789ರಲ್ಲಿ ಜೇನಾ ವಿಶ್ವವಿದ್ಯಾಲಯದ ಉದ್ಘಾಟನಾ ಉಪನ್ಯಾಸದಲ್ಲಿ ಫೇಡ್ರಿಕ್ ಟಿಲ್ಲರ್‌ರವರು Lide the ground work by promoting the notion of biilding ಎಂದರು. ವಿಸ್ತಾರವಾದ ತಳಪಾಯ ಹೊಂದಿದ ಶಿಕ್ಷಣವನ್ನು ವಿದ್ಯಾರ್ಥಿಗಳಿಗೆ ಕೊಡುವ ಮೂಲಕ ವಿದ್ಯಾರ್ಥಿಗಳ ಸಾಮಾನ್ಯ ಬುದ್ದಿವಿಕಾಸಕ್ಕೆ ವಿರೋಧಿಸುತ್ತಾ ಅವರನ್ನು ಕೇವಲ ನಿರ್ದಿಷ್ಠ ಉದ್ಯೋಗಕ್ಕೆ ತಯಾರು ಮಾಡಲಾಗುತ್ತಿದೆ ಎಂದರು.

ಹಂಬಲ್ಟ್ ಪ್ರಕಾರ ವಿಶ್ವವಿದ್ಯಾಲಯಗಳ ಕಾರ್ಯ ಎಂದರೆ "ಕಲಿಯುವಿಕೆಗಾಗಿ ಇಡೀ ದೇಹವನ್ನು ಸಜ್ಜುಗೊಳಿಸುವ ಮತ್ತು ಜ್ಞಾನದ ತಳಪಾಯವನ್ನು ಹಾಗೂ ಪ್ರಧಾನ ಅಂಶಗಳನ್ನು ವ್ಯಾಖ್ಯಾನಿಸುವುದಾಗಿದೆ" ಎಂದಿದ್ದಾರೆ. ಇಲ್ಲಿ 17ನೇ ಶತಮಾನದ ಮೊದಲ 5 ದಶಕದಲ್ಲಿ ವಿಜ್ಞಾನ ಎನ್ನುವ ಪದವನ್ನು ತತ್ವಶಾಸ್ತ್ರ ಎನ್ನುವ ಪದದೊಂದಿಗೆ ಆಂತರಿಕ ಬದಲಾವಣೆಗೊಳಪಡಿಸಿ ಬಳಸಲಾಯಿತು. ಇದರ ಅರ್ಥವನ್ನು ಎಲ್ಲಾ ಇತರ ಜ್ಞಾನಶಾಖೆಗಳಲ್ಲೂ ಉಪಯೋಗಿಸಿಕೊಳ್ಳಲಾಯಿತು. 1830ರ ನಂತರ ವಿಜ್ಞಾನ ಎನ್ನುವ ಪದವನ್ನು ನೈಸರ್ಗಿಕ ವಿಜ್ಞಾನ ಮತ್ತು ತತ್ವಶಾಸ್ತ್ರಗಳಿಂದ ಸ್ಪಷ್ಟವಾಗಿ ವಿಭಾಗೀಕರಿಸಲಾಯಿತು. 1830ರ ಹೊತ್ತಿಗೆ Sociology ಎಂಬ ಪದದ ಹುಟ್ಟಿಗೆ ಕಾರಣನಾದ ಆಗಸ್ಟಕಾಮ್ಟೆ ಹೇಳುವಂತೆ, ಬೇಕಾನ್, ಡೆಸ್ಕರಾಟ್ಸ್ ಮತ್ತು ಗೆಲಿಲಿಯೋರಿಂದ ಪ್ರಾರಂಭವಾದಂತಹ ಬುದ್ಧಿಶಕ್ತಿ ಕ್ರಿಯೆಯು ಇತರ ಜ್ಞಾನ ಶಾಖೆಗಳಲ್ಲೂ ಬಳಸಲಾಯಿತು. ಆತ ಸಮಸ್ಯೆಗಳ ಬಗ್ಗೆ ಹೇಳುತ್ತಾ ಅದಕ್ಕೆ ಕಾರಣಗಳು ಬೌದ್ಧಿಕ ಶ್ರಮಿಕರನ್ನು ವರ್ಗೀಕರಣಗೊಳಿಸಿದ್ದು, ಇಂದಿಗೂ ಸಾಮಾನ್ಯ ತತ್ವಶಾಸ್ತ್ರದ ಸಾಧ್ಯತೆಗಳು ಅನ್ವಯಿಕ ಜ್ಞಾನಗಳ ಗುರಿಯನ್ನು ಕಡಿಮೆ ಮಾಡಿ ಒಂದೇ ಬಗೆಯ ಧರ್ಮ ಸತ್ವ ಭೋಧಿಸುತ್ತಿವೆ ಎಂದರು.

17ನೇ ಶತಮಾನದ ಅಂತ್ಯ ಮತ್ತು 18ನೇ ಶತಮಾನದ ಪ್ರಾರಂಭದಲ್ಲಿ ವಿಜ್ಞಾನ ಮತ್ತು ವಿಜ್ಞಾನೇತರ ಶಿಸ್ತುಗಳ ರೀತಿ, ನೀತಿಗಳನ್ನು, ವಿಧಾನಗಳನ್ನು ವ್ಯಾಖ್ಯಾನಿಸುತ್ತಾ ಮಾನವಿಕ ಅಧ್ಯಯನದ ಶಿಸ್ತು ಮತ್ತು ಕೆಲವು ಹೊಸ ಸಮಾಜ ವಿಜ್ಞಾನಗಳಾದ ರಾಜಕೀಯ, ಅರ್ಥಶಾಸ್ತ್ರ,

ಸಮಾಜಶಾಸ್ತ್ರ, ಇಂಗ್ಲೀಷ್ ಮುಂತಾದ ಆಧುನಿಕ ವಿಷಯಗಳ ಬೆಳವಣಿಗೆಗೆ ಬೇಕಾದ ಶಕ್ತಿಶಾಲಿ ಪರಿಕಲ್ಪನೆಗಳನ್ನು ಅಭಿವೃದ್ಧಿಪಡಿಸಲಾಯಿತು.

ಫೆಡ್ರಿಕ್‌ರವರು ನಿಕರವಾಗಿ ತತ್ವಶಾಸ್ತ್ರವು ತನ್ನ ಅತಿಸ್ತೀಯ ಚಟುವಟಿಕೆಯಿಂದಾಗಿ ಹೇಗೆ ದುರ್ಗತಿಗೆ ಬಂದಿದೆ ಎಂಬುದನ್ನು ವಿವರಿಸುತ್ತಾರೆ. ತತ್ವಶಾಸ್ತ್ರದ ನಿಜವಾದ ಕೆಲಸವು ಮಾನವನ ಮೌಲ್ಯಗಳ ಮತ್ತು ಮೌಲ್ಯಾಧಾರಿತ ಭಾವನೆಗಳ ವ್ಯಾಪ್ತಿಯೊಳಗೆ ಸಂಚರಿಸುವುದಾಗಿದೆ. ಒಬ್ಬ ತತ್ವಜ್ಞಾನಿ ಇನ್ನೊಬ್ಬ ವಿಜ್ಞಾನಿಯಂತೆ ಯಾರು ತಮ್ಮೊಳಗೆ ಸಂಚರಿಸುವುದಕ್ಕೆ ಆಸ್ಪದ ಕೊಡದೆ ವಿಶೇಷವಾಗಿರುವರೋ ಹಾಗೆ ಅವರೆಂದಿಗೂ, ಅವರೇ ಸಮೀಕ್ಷಿಸಿದ ಮತ್ತು ಅವರ ನಿಜವಾದ ಎತ್ತರಕ್ಕೆ ಏರಲಾರರು ಎನ್ನುತ್ತಾರೆ.

ಸ್ಪಾನಿಷ್ ತತ್ವಶಾಸ್ತ್ರಜ್ಞರಾದ ಜಾಸ್ ಆರ್ಗೇಟ್ ಮತ್ತು ಗೆಸೆಟ್ 1930ರಲ್ಲಿ ಬರೆಯುತ್ತಾ "ಎಲ್ಲಾರು ಸ್ವೀಕರಿಸಲ್ಪಟ್ಟ ಜ್ಞಾನ ವಿಜ್ಞಾನಗಳು ಅದರ ಕಿರಿದಾದ ವ್ಯಾಪ್ತಿಯಿಂದ ಕಾಲಕ್ರಮೇಣ ಅವನತಿಯ ದಾರಿಯನ್ನು ಹಿಡಿಯಿತು" ಎಂದಿದ್ದಾರೆ. ತಮ್ಮ ವಾದವನ್ನು ಮುಂದುವರೆಸುತ್ತಾ ಹಿಂದೆ ಕಲಿಯಬೇಕಾದ ಮತ್ತು ನಿರ್ಲಕ್ಷಿಸಬೇಕಾದ ಅಧ್ಯಯನ ಶಿಸ್ತುಗಳನ್ನು ಸುಲಭವಾಗಿ ವಿಭಾಗೀಕರಿಸುತ್ತಾರೆ. ವೃತ್ತಿಯನ್ನು, ಸಂಪ್ರದಾಯವನ್ನು ನಿರ್ಲಕ್ಷಿಸುವ ವರ್ಗಗಳಿದ್ದವು ಎಂಬುದು ಅವರ ನಿಲುವಾಗಿತ್ತು. ಅರ್ಗೇಟಾರವರು ತತ್ವಶಾಸ್ತ್ರದ ಅನುಕೂಲವು ಅಧ್ಯಯನ ವಿಧಾನವಲ್ಲದ ಚಟುವಟಿಕೆಯೂ ಹೊಸ ಪ್ರಜಾಸತ್ತಾತ್ಮಕ ವ್ಯವಸ್ಥೆಯಲ್ಲಿ ಒಂದಾಗಲೂ ಸಾಧ್ಯವಾಗಲಿಲ್ಲ. ಸಮುದಾಯಕ್ಕೆ ಬೇಕಾದ ರಕ್ಷಣೆ, ಗಮನ ಮತ್ತು ಅನುಭೂತಿಯನ್ನು ನೀಡಲಿಲ್ಲ. ಇದರಿಂದಾಗಿ ಮನುಷ್ಯ ತನ್ನ ಸರಾಸರಿ ಉಪಸೇವೆಗಳಿಂದ ಮತ್ತು ಸಂಪೂರ್ಣ ಸೃಷ್ಟಿಗುಣ ನೀಡದ ಲಕ್ಷಣಗಳ ನಿರ್ವಹಣೆಗಳಿಂದ ಮುಕ್ತನಾದನು.

ಒಂದು ಅಧ್ಯಯನ ಶಿಸ್ತಿನ ಯಶಸ್ಸು ಭಾಗಶಃ ಅವಲಂಬಿತವಾಗಿರುವುದು ಅದರ ಬಾಹ್ಯ ಗುರುತಿಸುವ ಅಂಶಗಳಾದ ಸರ್ಕಾರ ಮತ್ತು ಭವಿಷ್ಯದ ವ್ಯಾಪಾರಿ ಮನೋಭಾವನೆಯವರಿಂದಾಗಿ ಮಾತ್ರ. ಇದರ ಎರಡು ಪ್ರಮುಖ ಕಾರ್ಯಗಳು ಎಂದರೆ ವೃತ್ತಿಗಾಗಿ ನಿರ್ದಿಷ್ಟ ಕ್ಷೇತ್ರ ಮತ್ತು ನಿರ್ದಿಷ್ಟ ವಿಷಯದಲ್ಲಿ ಅನುಭವಿಗಳಾದ ವ್ಯಕ್ತಿಗಳನ್ನು ತಯಾರುಮಾಡುವುದು ಮತ್ತು ಈ ಹೊಸ ವೃತ್ತಿಗಳನ್ನು ನ್ಯಾಯಯುತವಾಗಿ ಪಾಂಡಿತ್ಯದಲ್ಲಿ ವಿಶ್ವಾಸಾರ್ಹ ಅಂತಸ್ಥು ಹೊಂದಿರುವವರಿಗೆ ನೀಡುವುದಾಗಿದೆ.

# ಅಧ್ಯಾಯ – 2

## ಸಾಹಿತ್ಯದಿಂದ ಸಂಸ್ಕೃತಿಯೆಡೆಗೆ

ಅಂತರ್‌ಶಿಸ್ತೀಯ ಅಧ್ಯಯನವನ್ನು ಸಾಹಿತ್ಯದಿಂದ ಸಂಸ್ಕೃತಿಯನ್ನು ಅಭ್ಯಾಸಿಸಲು ಬಳಸಲು ಪ್ರಾರಂಭಿಸಲಾಯಿತು. ಆ ಮೂಲಕ ಸಮಾಜಶಾಸ್ತ್ರ, ಮಾನವಶಾಸ್ತ್ರ, ಇತಿಹಾಸ, ವ್ಯಾಕರಣಶಾಸ್ತ್ರ, ತತ್ವಶಾಸ್ತ್ರ, ಪಠ್ಯ ವಿಮರ್ಶೆ. ಮೂರ್ತ ಸಂಸ್ಕೃತಿ, ಭೂಗೋಳಶಾಸ್ತ್ರ, ರಾಜಕೀಯ, ಆರ್ಥಿಕ ಮತ್ತು ಮನೋವಿಜ್ಞಾನ ಕ್ಷೇತ್ರಗಳಲ್ಲಿ ಬಳಸಿಕೊಳ್ಳಲಾಯಿತು. ಇಲ್ಲಿ ಸಾಂಸ್ಕೃತಿಕ ಅಧ್ಯಯನವು ಸಮಾಜಶಾಸ್ತ್ರ ಮತ್ತು ಮಾನವಶಾಸ್ತ್ರಗಳ ನಡುವೆ ವಿಭಾಗೀಕರಣ ಮಾಡಲಾಯಿತು. ಇದರಿಂದ ಸಾಹಿತ್ಯದ ಅಧ್ಯಯನ ಶಿಸ್ತುಗಳಲ್ಲಿ ಅಡಗಿರುವ ಸಾಹಿತ್ಯದ ಮೂಲಕ ಸುಪ್ತವಾಗಿರುವ ಸಂಸ್ಕೃತಿ ಎಂಬ ಕಲ್ಪನೆಯನ್ನು ಗುರುತಿಸುವುದು ಸವಾಲಾಗಿದೆ. ಅಲ್ಲದೇ ಅಧ್ಯಯನ ಶಿಸ್ತುಗಳ ನಡುವೆ ಪ್ರತ್ಯೇಕೀಕರಣ ಮಾಡುವುದು ಹೆಚ್ಚು ಸವಾಲಾಗಿದೆ.

ಸಾಂಸ್ಕೃತಿಕ ಅಧ್ಯಯನ ಅಂತರ್‌ಶಿಸ್ತೀಯ ಕಾರ್ಯಕ್ರಮಗಳ ಬಗ್ಗೆ ಆಶಯವಿಟ್ಟುಕೊಂಡು ಅದರಲ್ಲಿ ಸುಪ್ತವಾಗಿ ಅಡಗಿರುವ ಅಂಶಗಳ ನಿಶ್ಚಿತತೆಯನ್ನು ಇಟ್ಟುಕೊಳ್ಳದೇ ರಾಜಕಾರಣದ ಜ್ಞಾನ ಮತ್ತು ಪ್ರತಿನಿಧಿಸುವಿಕೆಯನ್ನು ಅನುಮಾನದಿಂದ ನೋಡುವುದಾಗಿದೆ. ಶಿಕ್ಷಣದ ಅಧ್ಯಯನದಲ್ಲಿ ಸಾಂಸ್ಕೃತಿಕ ಅಧ್ಯಯನ ಎನ್ನುವುದು ಒಂದು ಶೋಭಾಚಾರವಾಗಿ ಬೆಳವಣಿಗೆ ಹೊಂದಿತು. ಅಮೇರಿಕಾ ದೇಶದಲ್ಲಿಯೂ ಆ ಬಗ್ಗೆ ಹೆಚ್ಚು ಪ್ರಚಾರ ದೊರೆಯಿತು. ಇಲ್ಲಿ ಸಂಪ್ರದಾಯಬದ್ಧವಾದ ಅಧ್ಯಯನ ಶಿಸ್ತುಗಳ ಭವಿಷ್ಯದ ಸಂಬಂಧವಾದ ವಿಷಯದ ತೀಕ್ಷ್ಣ ಬಿಂದುವಾಗಿದ್ದು, ಅದನ್ನು ಈ ಅಧ್ಯಯನದ ಕೊನೆಯಲ್ಲಿ ಅಭ್ಯಾಸಿಸಲಾಗಿದೆ. ಹಿಂದಿನಿಂದಲೂ ಸಂಸ್ಕೃತಿಯ ಅಧ್ಯಯನ ಹೆಚ್ಚು ವಿವಾದ ಉಂಟುಮಾಡುತ್ತಿದ್ದು ಮತ್ತು ಪರಸ್ಪರ ವಿರುದ್ಧವಾದ ಅಭಿಪ್ರಾಯವನ್ನು ಸಾಮಾಜಿಕ ಕ್ಷೇತ್ರದಲ್ಲಿ ಹೊಂದಿದ್ದು, ಅಂತರ್‌ಶಿಸ್ತೀಯ ಅಧ್ಯಯನದ ಸಾಧ್ಯತೆಯು ವಿಸ್ತಾರವಾದ ಸಮೀಕ್ಷೆಯನ್ನು ಮಾಡುವ ಪ್ರಯತ್ನದಲ್ಲಿದೆ.

**ಮೂಲ ದಾಖಲೆಗಳು**

ಸಂಸ್ಕೃತಿ ಅಧ್ಯಯನಗಳ ಉದಯ ವಿಶ್ವವಿದ್ಯಾಲಯಗಳ ಒಳಗೆ ಸಾಂಸ್ಥಿಕ ಗೌರವಕ್ಕೆ ಪಾತ್ರವಾಗಿದೆ. ರಿಚರ್ಡ್ ಹೊಗಾರ್ಟ್ ಮತ್ತು ರೇಮಂಡ್ ವಿಲಿಯಂ ಈ ಇಬ್ಬರ ಶ್ರಮವು ಸಂಸ್ಕೃತಿಯ ಅಧ್ಯಯನದಲ್ಲಿ ಪ್ರಮುಖ ಪಾತ್ರ ವಹಿಸುತ್ತದೆ. ಟಾಮ್‌ಸ್ಟೀಲ್ ಪ್ರಕಾರ ಬ್ರಿಟನ್‌ನಲ್ಲಿಯೂ ಕೂಡ ಸಂಸ್ಕೃತಿಯ ಅಧ್ಯಯನ ಮಾಡುವಾಗ ಸಾಮಾನ್ಯ ತಪ್ಪು ಕಲ್ಪನೆಯೊಂದು ಸರಳವಾಗಿ ಇಂಗ್ಲೀಷ್ ಅಧ್ಯಯನದಲ್ಲಿ ಉದಯಗೊಂಡ 'ಜಾರತ್ವದ ಸಂತತಿ'ಯ

ಲೇವಿಸನ ತತ್ವವನ್ನು ಮೂಲತತ್ವವಾಗಿ ಮಾಡಿಕೊಂಡು ಉಪಶಾಖೆಯಾಗಿ ಬೆಳೆಯಿತು. 1930 ಮತ್ತು 1950ರ ನಡುವೆ ಸಂಸ್ಕೃತಿಯ ಅಧ್ಯಯನವು ರಾಜಕೀಯ ಮತ್ತು ಅಂತರ್‌ಶಿಸ್ತೀಯ ಉದ್ದೇಶವನ್ನಿಟ್ಟುಕೊಂಡು ವಯಸ್ಕರ ಶಿಕ್ಷಣ ಕಾರ್ಯಕ್ರಮದಲ್ಲಿ ಬೆಳವಣಿಗೆಯಾಯಿತು. ಆ ಕಾಲದಲ್ಲಿ ರಾಜಕೀಯ ಮತ್ತು ಸಂಸ್ಕೃತಿ, ಸಾಹಿತ್ಯ ಮತ್ತು ಸಮಾಜಶಾಸ್ತ್ರದ ಉಪನ್ಯಾಸಕರ ನಡುವೆ ಬಿಸಿ ಬಿಸಿ ಚರ್ಚೆಗಳಾದವು. ಉನ್ನತ ಶಿಕ್ಷಣದಲ್ಲಿ ಸಂಸ್ಕೃತಿಯ ಅಧ್ಯಯನವನ್ನು ಸಂಸ್ಥೀಕರಿಸುವುದರಿಂದ 1960ರಲ್ಲಿ ಬ್ರಿಟಿಷ್ ವಿಶ್ವವಿದ್ಯಾಲಯದ ರಚನೆಯಲ್ಲಿ ಭಾಗಶಃ ಬದಲಾವಣೆಯನ್ನುಂಟುಮಾಡಿತು. ಇದು ಅಧ್ಯಯನ ಶಿಸ್ತುಗಳ ನಡುವೆ ಪರಸ್ಪರ ಸಹಕಾರ ಮತ್ತು ಸ್ಥಿತಿಸ್ಥಾಪಕತ್ವಕ್ಕೆ ಅವಕಾಶವಾಯಿತು.

ಆಕ್ಸ್‌ಫರ್ಡ್ ವಿಶ್ವವಿದ್ಯಾಲಯ 'ಸಂಸ್ಕೃತಿ' ಎಂಬ ಮಾನವಿಕ ವಿಷಯಗಳ ಅಂತರ್‌ಶಾಸ್ತ್ರೀಯ ಅಧ್ಯಯನದ ಮೂಲಕರ್ತೃವಾಗಿ 1970ರ ನಂತರ ಸಾಂಸ್ಕೃತಿ ಅಧ್ಯಯನಕ್ಕೆ ಮೂಲ ನೆಲೆಗಟ್ಟನ್ನು ಅಭಿವೃದ್ಧಿಪಡಿಸಿತು. 1964ರಲ್ಲಿ ಬರ್ನಿಂಗ್ ಹ್ಯಾಮ್ ವಿಶ್ವವಿದ್ಯಾಲಯದಲ್ಲಿ ಸಾಂಸ್ಕೃತಿಕ ಅಧ್ಯಯನವು, ಸಾಂಸ್ಥಿಕ ಅಧ್ಯಯನವಾಗಿ ತನ್ನ ಪಾದಾರ್ಪಣೆ ಮಾಡಿತು. ಹೊಗಾರ್ಟರವರ ನಿರ್ದೇಶನದಲ್ಲಿ ಸಮಕಾಲಿನ ಸಾಂಸ್ಕೃತಿಕ ಅಧ್ಯಯನ ಕೇಂದ್ರವನ್ನು ಸ್ಥಾಪಿಸಲಾಯಿತು.

ಈ ಕೇಂದ್ರವು ವಿಶಿಷ್ಠ ಆಚರಣೆಗಳನ್ನು ಅಧ್ಯಯನ ಮಾಡಲು ಪ್ರಾರಂಭಿಸಿತು. ಆದರೆ ಹೂಗಾರ್ಟ್‌ರವರು ಬರೆಯುತ್ತ ಸಾಂಸ್ಕೃತಿಕ ಅಧ್ಯಯನವನ್ನು 'ಹಲವು ಜನಗಳ ಬಗ್ಗೆ ನನಗೆ ಗೊತ್ತು. ಇಂಗ್ಲೀಷ್ ವಿಭಾಗದಲ್ಲಿನ ಉತ್ತಮ ಅಂಕಗಳನ್ನು ನಿಶಬ್ದವಾಗಿ ಪಡೆದುಕೊಂಡು, ಹೇಗೆಂದರೆ ಒಂದು ಮೇಲ್ವರ್ಗದವರ ಮನೆಯ ಪ್ರೀತಿಯ ಬೆಕ್ಕು ಕೊಳೆತ ವಸ್ತುವನ್ನು ಮನೆಯಲ್ಲಿ ತಂದಿಟ್ಟುಕೊಂಡ ಹಾಗೆ" ಎಂದು ಬರ್ನಿಂಗ್‌ಹ್ಯಾಮ್ ವಿಶ್ವವಿದ್ಯಾಲಯದಲ್ಲಿ ಸಾಂಸ್ಕೃತಿಕ ಅಧ್ಯಯನಗಳ ಉದಯದ ಬಗ್ಗೆ ಹೇಳುತ್ತಾರೆ. ಅದೇನೇ ಇದ್ದರು ಕೂಡ ಇಂಗ್ಲೀಷ್ ವಿಭಾಗದಲ್ಲಿಯೇ ಈ ಕೇಂದ್ರ ಪ್ರಾರಂಭವಾಯಿತು. ಇದಕ್ಕೆ ಬಾಹ್ಯ ಮೂಲವನ್ನು ಒದಗಿಸಲಾಯಿತು. ಅದನ್ನು ಹೊಗಾರ್ಟ್‌ರವರು "ಕಡಿಮೆ ಬೆಲೆಯ ಟೊಪ್ಪಿಯಲ್ಲಿ ಸೊಗಸಿನ ಬರಹ" ಎಂದರು. ಸಮಕಾಲಿನ ಸಾಂಸ್ಕೃತಿಕ ಅಧ್ಯಯನ ಕೇಂದ್ರದ ಬರವಣಿಗೆಯಿಂದ ಹೂಗಾರ್ಟ್‌ರವರು ಇಂಗ್ಲೀಷ್ ವಿಷಯದ ಇಂತಹ ಪಾತ್ರಗಳ ಬಗ್ಗೆ ಪರಸ್ಪರ ಚರ್ಚಿಸಿ ಮೂಲಾಧಾರಗಳನ್ನು ಪಡೆದರು. ಜೊತೆಗೆ ಇಂಗ್ಲೀಷ್ ಮತ್ತು ಇತರ ಅಧ್ಯಯನ ಶಿಸ್ತುಗಳ ನಡುವಿನ ಸಂಬಂಧವನ್ನು ಅಭಿವೃದ್ಧಿಪಡಿಸಿದರು.

ವಿಲಿಯಮ್ಸ್‌ರವರು ಸೂಚಿಸುವಂತೆ ಸಾಹಿತ್ಯದ ಮೂಲ ಅರ್ಥವು ಅಂತರ್‌ಶಿಸ್ತೀಯ ಎಂದಾಗುತ್ತದೆ (Willioms - 1977-149) 18ನೇ ಶತಮಾನದ ಅಂತ್ಯದವರೆಗೂ ಸಾಹಿತ್ಯದ ಎಲ್ಲಾ ಬರವಣಿಗೆಗಳು, ವೈಜ್ಞಾನಿಕತೆ, ಆತ್ಮಚರಿತ್ರೆ ಮತ್ತು ಇತಿಹಾಸವನ್ನು ಕಟ್ಟುಕಥೆ ಎಂದಿದ್ದರು. ಸಾಹಿತ್ಯದ ಬಗ್ಗೆ ಹೇಳುತ್ತಾ ಸಾಹಿತ್ಯ ಕಲ್ಪನೆಗಳಂದ ಅಲಂಕಾರ ಶಾಸ್ತ್ರದಲ್ಲಿಯೇ ಪತ್ಯಕವನ. ಭಾಷಣ, ನೆನಪುಗಳು, ಇತಿಹಾಸ ಮತ್ತು ತತ್ವಶಾಸ್ತ್ರಗಳ ಬಗೆಗಿನ ಬರವಣಿಗೆಯನ್ನು

ಉದಾಹರಿಸಬಹುದು ಎಂದರು. ವಿಲಿಯಂರವರ ಮೊದಲ ಕೃತಿ, ಸಂಸ್ಕೃತಿ ಮತ್ತು ಸಮಾಜ. ಇದರಲ್ಲಿ ವಿವರಿಸುವಂತೆ ಜೈವಿಕ ಪೂರ್ವ ವಿಕಾಸವು ಕೈಗಾರಿಕೋದ್ಯಮ ಅಥವಾ ನಗರಗಳ ಗತಿಸಿದ ದಿನಗಳನ್ನು ಭಾವನಾತ್ಮಕವಾಗಿ ನೆನೆದು ಹಂಬಲಿಸುವುದಾಗಿದೆ. ವಿಲಿಯಂಸ್‌ರವರು, ಲೇವಿಸರ್ ಗ್ರಂಥ ವಿಮರ್ಶೆ ಮಾಡುತ್ತಾ ಸಂಸ್ಕೃತಿ ಮತ್ತು ಪರಿಸರ ಇದರಲ್ಲಿ ಸಾಹಿತ್ಯಕ ಮೂಲಗಳ ಮೂಲಕ ಒಬ್ಬರ ಅನುಭವವನ್ನು ವ್ಯಕ್ತಪಡಿಸುತ್ತಿದ್ದು ವಾಸ್ತವವಾಗಿ ಎಲ್ಲಾ ರೀತಿಯ ವಸ್ತುಗಳನ್ನು ತೆಗೆದುಕೊಂಡು ಸಂಸ್ಕೃತಿಯ ಅವಶ್ಯಕತೆಗಳ ಬಗ್ಗೆ ತುಲನಾತ್ಮಕ ಅಧ್ಯಯನ ಮಾಡಿ ಅದರಲ್ಲಿ ವೈಜ್ಞಾನಿಕ ಮತ್ತು ತತ್ವಶಾಸ್ತ್ರೀಯ ವ್ಯಾಖ್ಯಾನ ಮಾಡುವುದೆಂದೂ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ.

ವಿಲಿಯಂಸ್‌ರವರು ಸಾರ್ವಜನಿಕವಾದ ಮತ್ತು ಹೆಚ್ಚು ಒಟ್ಟಾಗಿರುವ ಸಮೂಹ ಮಾಧ್ಯಮಗಳನ್ನು ವಿಭಾಗಿಸುತ್ತಾ, ದುಡಿಯುವ ವರ್ಗದಲ್ಲಿ ಕಂಡು ಬರುವ ಸಂಸ್ಕೃತಿಯನ್ನು ಹೆಚ್ಚು ಜನಪ್ರಿಯಗೊಳಿಸಿ, ಪ್ರಜಾಸತ್ತಾತ್ಮಕಗೊಳಿಸಬಹುದು ಎನ್ನುತ್ತಾರೆ. ಈ ನಿಟ್ಟಿನಲ್ಲಿ ವಿಲಿಯಂಸ್‌ರವರ ಅಂತರ್‌ಶಿಸ್ತೀಯವು ಲೇವಿಸ್‌ರವರ ಎಡ ಸಿದ್ಧಾಂತದ ಭಾಗಶಃವಾಗಿದ್ದು ಕೆಲವು ಸಾಂಸ್ಕೃತಿಕ ರೂಪಗಳಿಗೆ ಪ್ರಾಮುಖ್ಯತೆ ನೀಡಿ ಸಾಮಾನ್ಯ ಸಂಸ್ಕೃತಿಯನ್ನು ಚೆನ್ನಾಗಿಯೇ ಮುಂದುವರೆಸಿಕೊಂಡು ಹೋಗುತ್ತದೆ. 'ಸಂಸ್ಕೃತಿ' ಮತ್ತು ಸಾಹಿತ್ಯವನ್ನು ವಿವರವಾಗಿ ಪುನರ್‌ರಚಿಸಿ ಮತ್ತು ವರ್ಗೀಕರಿಸಿಸುವ ಪ್ರಯತ್ನವನ್ನು ತಿರಸ್ಕರಿಸಿ, ಸಾಂಪ್ರದಾಯಿಕವಾಗಿ ಮೌಲ್ಯಮಾಪನಗೊಳಿಸಿದ ಅಧ್ಯಯನ ಶಿಸ್ತನ್ನು ವಿಲಿಯಂಸ್‌ರವರ ಕೃತಿಯಲ್ಲಿ ನಿಶ್ಯಬ್ಧ ರೀತಿಯಲ್ಲಿ ಗಮನಿಸಬಹುದು.

## ಸಮಾಜ ಶಾಸ್ತ್ರೀಯ ತಿರುವು

ಸ್ಟುವರ್ಟ್ ಹಾಲ್‌ರವರ ನೇತೃತ್ವದಲ್ಲಿ 1968 ಮತ್ತು 1879ರ ನಡುವೆ ಸಮಕಾಲೀನ ಸಾಂಸ್ಕೃತಿಕ ಅಧ್ಯಯನ ಕೇಂದ್ರವನ್ನು ಪ್ರಾರಂಭಿಸಿ, ಸಮಾಜ ಶಾಸ್ತ್ರೀಯ ಕಲ್ಪನೆಯಾದ ಸಂಸ್ಕೃತಿಯನ್ನು ಹೆಚ್ಚು ವಿಸ್ತಾರವಾಗಿ ಅಧ್ಯಯನ ಮಾಡಲಾಯಿತು. ಸಮಾಜಶಾಸ್ತ್ರವು ಸಾಮಾಜಿಕ ವಿಜ್ಞಾನಗಳ ವಿಭಾಗವಾಗಿದ್ದು, ಮಾನವ ಸಮಾಜ ಮತ್ತು ಸಾಮಾಜಿಕ ಸಂಬಂಧವನ್ನು ಅಧ್ಯಯನ ಮಾಡುತ್ತದೆ. ಸಾಂಸ್ಕೃತಿಕ ಅಧ್ಯಯನದ ದೃಷ್ಟಿಯಲ್ಲಿ ವಿಸ್ತಾರವಾದ ವ್ಯಾಪ್ತಿಯನ್ನು ಹೊಂದಿದೆ. ಈ ಅನುಕೂಲತೆಯಿಂದಾಗಿ ಯಾವುದೇ ಇತರ ಸಮಾಜ ವಿಜ್ಞಾನಗಳ ಸಿದ್ಧಾಂತ ಮತ್ತು ಅಧ್ಯಯನ ಶಿಸ್ತುಗಳಾದ ತತ್ವಶಾಸ್ತ್ರ ಇತಿಹಾಸ ಮತ್ತು ರಾಜಕೀಯ ವಿಧಾನಕ್ಕಿಂತಲೂ ಹೆಚ್ಚು ವಿಶಾಲ ವ್ಯಾಪ್ತಿ ಹೊಂದಿದೆ. ಅದೇನೇ ಇದ್ದರೂ ಹಾಲ್ ಮತ್ತು ಸಂಗಡಿಗರು ಸಮಾಜಶಾಸ್ತ್ರದೊಂದಿಗಿನ ನಿಶ್ಚಿತತೆಯಿಂದಾಗಿ ಸಮಾಜಶಾಸ್ತ್ರವು ಬಹಳ ಸರಳಶಾಸ್ತ್ರವಾಗಿದ್ದು ನಿರ್ದಿಷ್ಟವಾದ ಸಾಂಪ್ರದಾಯಿಕ ವ್ಯಾಖ್ಯೆಯು ಅದನ್ನು ಒಂದು ವಿಜ್ಞಾನ ಎಂದು ಪರಿಗಣಿಸಿದೆ.

ಅಗಸ್ಟಕಾಮ್ಟೆ 1830ರಲ್ಲಿ Sociology ಎಂಬ ಶಬ್ದವನ್ನು ಪರಿಚಯಿಸಿದರು. ಅವರ Positivism ನ ಒಂದು ಭಾಗವಾಗಿತ್ತು. ಇಂದ್ರಿಯ ಜನ್ಯ ವಿಧಾನದ ಮೂಲಕ ಎಲ್ಲಾ ವಾಸ್ತವ ಜ್ಞಾನಗಳನ್ನು ಪಡೆದುಕೊಳ್ಳಬಹುದು. ಈ ಸ್ವಾಭಾವಿಕ ವಿಜ್ಞಾನಗಳ ಕ್ರಮವನ್ನು

ಸಮಾಜವಿಜ್ಞಾನಗಳಗೂ ವರ್ಗಾಯಿಸಬಹುದು ಎಂದರು. ವಾಸ್ತವವಾಗಿ ಕಾಮ್ಟೆ ಸಮಾಜಶಾಸ್ತ್ರವನ್ನು ವ್ಯಾಖ್ಯಾನಿಸುತ್ತಾ, ಸಮಾಜದಲ್ಲಿ ವಿಸ್ತಾರವಾಗಿ ಅಧ್ಯಯನ ಮಾಡುವ ಏಕೈಕ ವಿಜ್ಞಾನ. ಇದು ಸಾಮಾಜಿಕ ಭೌತಶಾಸ್ತ್ರದಂತೆ ಎಂದಿದ್ದಾರೆ. ಅದು ಮಾನವನ ಮನಸ್ಸು ಸೃಷ್ಟಿಸುವ ಬಾಹ್ಯಾಕಾಶ ಮತ್ತು ಭೂ ಭೌತಶಾಸ್ತ್ರ, ಯಂತ್ರ ಮತ್ತು ರಸಾಯನ ಶಾಸ್ತ್ರ ಎಂದು ವಾದಿಸುತ್ತಾ, ಸಮಾಜಶಾಸ್ತ್ರವು 'ಸಂಪೂರ್ಣ ವ್ಯವಸ್ಥೆಯನ್ನು ಅವಲೋಕಿಸುವ ವಿಜ್ಞಾನ' ಎಂದು ಕರೆದರು. [Comte 1830-42] [1874:27] ಅಗಸ್ಟ ಕಾಮ್ಟೆಯ ನಂತರ ಸಮಾಜಶಾಸ್ತ್ರಕ್ಕಾಗಿ ದುಡಿದವರು ಎಮಿಲೆ ಡರ್ಕಿಂ 19ನೇ ಶತಮಾನದ ಅಂತ್ಯಭಾಗದ ವಿಶ್ವವಿದ್ಯಾಲಯಗಳಲ್ಲಿ ಸಮಾಜಶಾಸ್ತ್ರವನ್ನು ಅಧ್ಯಯನ ವಿಷಯವನ್ನಾಗಿ ಸ್ಥಾಪಿಸಿದ ಕೇಂದ್ರ ವ್ಯಕ್ತಿ. ಅವರು 'ಸಾಮಾಜಿಕ ಸತ್ಯಗಳನ್ನು ಒಂದು ವಸ್ತುವಿನಂತೆ ನೋಡಿ' ಎಂದರು.

ಅಮೇರಿಕಾದಲ್ಲಿ 1950ರ ವೇಳೆಗಾಗಲೇ ಸಮಾಜಶಾಸ್ತ್ರವನ್ನು ವೃತ್ತಿಯಾಧಾರಿತವಾಗಿಸಿದರು. ಅದು ರಾಜಕೀಯದೊಂದಿಗಿನ ತನ್ನ ಆಸಕ್ತಿಯನ್ನು ದೂರ ಮಾಡಿತು ಮತ್ತು ಸಾಮಾಜಿಕ ಸಂಬಂಧಗಳಲ್ಲಿನ ಮೂರ್ತ ಸಿದ್ಧಾಂತಗಳಿಗೆ ಅನುಕೂಲವಾಗುವ ರೀತಿ ನಿಯಮವನ್ನು ರೂಪಿಸಲಾಯಿತು. ಸಮಾಜ ಮತ್ತು ಸಾಂಸ್ಕೃತಿಕ ಮಾನವಶಾಸ್ತ್ರ ಪರಸ್ಪರ ಸಂಬಂಧಿತ ವಿಷಯಗಳಾಗಿದ್ದು ಅವುಗಳು ಮಾನವ ಸಮಾಜದ ಸಂಸ್ಕೃತಿ ಮತ್ತು ರಚನೆಯನ್ನು ಅಧ್ಯಯನ ಮಾಡುತ್ತಿದೆ.

ಆಧುನಿಕ ಮಾಧ್ಯಮಗಳಾದ ಸಿನೆಮಾ, ದೂರದರ್ಶನ ಮತ್ತು ಡಿಜಿಟಲ್ ತಾಂತ್ರಿಕತೆ ಇವುಗಳೊಂದಿಗೆ ಸಾಮಾಜಿಕ ರೂಪ ಮತ್ತು ಸಾಂಸ್ಕೃತಿಕ ಆಚರಣೆಗಳೂ ಸಂಘಟಿತವಾಗಿ ಬೆಳಕಿಗೆ ಬಂದವು. ಮನುಕುಲ ಅಧ್ಯಯನಶಾಸ್ತ್ರದ ಕಡೆ ಸಮಕಾಲಿನ ಸಂಸ್ಕೃತಿ ಅಧ್ಯಯನ ಕೇಂದ್ರವು ತಿರುಗಿದ್ದು ಸಾಮಾನ್ಯ ಸಾಮಾಜಿಕ-ವೈಜ್ಞಾನಿಕ-ಸಾಹಿತ್ಯಗಳ ಅಭಿವೃದ್ಧಿಯಾಯಿತು. ಪ್ರೆಟ್ಟಿ ಸೂಚಿಸುವಂತೆ ಸಂಸ್ಕೃತಿ ಅಧ್ಯಯನ ಸರಳವಾಗಿ ಸಮಾಜಶಾಸ್ತ್ರದ ಮತ್ತೊಂದು ಪೀಳಿಗೆ ಎಂದರು. ಇದರಿಂದಾಗಿ ಎಲ್ಲಾ ವಿಧದ ಸಂಸ್ಕೃತಿಗಳ ನಡುವಿನ ಸಂಬಂಧದ ಬಗ್ಗೆ ಪ್ರಶ್ನೆ ಮಾಡುವ ಶಕ್ತಿಯು ಅಧ್ಯಯನ ಶಿಸ್ತುಗಳ ನಡುವೆ ಅಂತರ ರೂಪಿಸಬಹುದು. ನಂತರ 1970ರ ಸುಮಾರಿಗೆ ಸಮಕಾಲಿನ ಸಂಸ್ಕೃತಿ ಅಧ್ಯಯನ ಕೇಂದ್ರವು ವಿಷಯ ಅಧ್ಯಯನ ಪದ್ಧತಿಯನ್ನು ಪ್ರಾರಂಭಿಸಿತು. ಸಂಸ್ಕೃತಿ ಅಧ್ಯಯನಗಳು ಪಠ್ಯ ವಿಷಯಗಳಲ್ಲಿ ವಿಸ್ತೃತ ವ್ಯಾಪ್ತಿಯನ್ನು ಹೊಂದಿರುವುದು ಎಂಬುದನ್ನು ತೋರಿಸಲು ಹಾಲ್ ರವರ ಕಲ್ಪನೆಯಾದ ಸಂಕೇತಿಸುವುದು ಮತ್ತು ಅನುವಾದಿಸುವುದು ಎನ್ನುವ ಕಲ್ಪನೆ ಪ್ರಮುಖ ಉದಾಹರಣೆಯಾಗಿದೆ.

ಸಂಸ್ಕೃತಿ ಅಧ್ಯಯನಗಳು ಸಾಮಾನ್ಯವಾಗಿ ಮಾಧ್ಯಮ ಪಠ್ಯಪುಸ್ತಕಗಳ ನೆನಪು ತರುತ್ತವೆ. ವಾಸ್ತವವಾಗಿ ಪುಸ್ತಕವು ಸಮೂಹ ಮಾಧ್ಯಮದ ಮೂಲವೂ ಹೌದು. ಮುದ್ರಣ ಯಂತ್ರಗಳ ಅವಿಷ್ಕಾರ, ಅಂತರ್ ಜಾಲ ಮತ್ತು ಕಂಪ್ಯೂಟರ್ ಇವೆಲ್ಲವೂ ಸಾಹಿತ್ಯದ ಸಹಾಯದಿಂದ ಸಂಸ್ಕೃತಿಯ ಬಗ್ಗೆ ಪುಸ್ತಕ ಬರೆಯಲು, ಪ್ರಕಟಿಸಲು ವಿತರಣೆ ಮತ್ತು ಮಾರಾಟ ಮಾಡಲು ಸಹಾಯವಾಗುತ್ತದೆ. ಸಾಹಿತ್ಯದ ಕೆಲಸಗಳು ಇಲ್ಲಿ ಆಸಕ್ತಿಕರವಾದ ವಿಷಯವಾಯಿತು.

ಪುಸ್ತಕಗಳು ಇತರ ಮಾಧ್ಯಮ ಪುಸ್ತಕಗಳಿಗಿಂತ ಹೆಚ್ಚು ಕ್ಲಿಷ್ಟಕರವಾಗಿರುತ್ತದೆ. ಈ ನಿಟ್ಟಿನಲ್ಲಿ ಸಮೂಹ ಮಾಧ್ಯಮಗಳ ಸಂಸ್ಕೃತಿ ಅಧ್ಯಯನವು ಸಮಾಜಶಾಸ್ತ್ರದಲ್ಲಿ ಸಾಂಸ್ಕೃತಿಕ ಆಚರಣೆ ಮತ್ತು ಆರ್ಥಿಕ ಅಂಶಗಳನ್ನು ಹೆಚ್ಚು ಗಂಭೀರವಾಗಿ ಸಾಹಿತ್ಯದ ಭಾಗದೊಂದಿಗೆ ಅಧ್ಯಯನ ಮಾಡಲು ಪ್ರಾರಂಭಿಸಿದರು.

## ದಿನನಿತ್ಯದ ಜೀವನದಲ್ಲಿ ಸಂಸ್ಕೃತಿ

ಮೈಕಲ್ ಡಿ.ಸರ್‌ಟಿಯಾರವರ ಪ್ರಮುಖ ಕೃತಿಯಾದ 'The practice of every day life' ಪುಸ್ತಕದಲ್ಲಿ ಸಂಸ್ಕೃತಿ ಅಧ್ಯಯನಗಳಲ್ಲಿ ಅಂತರ್‌ಶಿಸ್ತೀಯದ ಸಾಧ್ಯತೆಯ ಗುರಿಯನ್ನು ವಿವರಿಸುತ್ತಾರೆ. ದಿನನಿತ್ಯದ ಜೀವನದಲ್ಲಿ ಭಾಷೆ ಮತ್ತು ವೈಜ್ಞಾನಿಕ ಆಚರಣೆಗಳು ನಮ್ಮನ್ನು ಮುಖ್ಯವಾಹಿನಿಯಲ್ಲಿ ಕೊಂಡೊಯ್ಯುತ್ತವೆ ಎಂದಿದ್ದಾರೆ. ಈ ಕೃತಿಯು ನಮ್ಮ ದೈನಂದಿನ ಸಂಸ್ಕೃತಿಯ ಚಟುವಟಿಕೆಗಳನ್ನು ತಮ್ಮ ವಿಶೇಷ ಆಸಕ್ತಿಯ ಮೂಲಕ ಸಮಕಾಲೀನ ಸಂಸ್ಕೃತಿಯ ಜಾಲದಲ್ಲಿ ಕಣ್ಣು ಹಾಯಿಸಲು ಸಹಾಯಕವಾಗುತ್ತದೆ. ಸರ್‌ಟಿಯಾರವರು ದೈನಂದಿನ ಸಂಸ್ಕೃತಿಯ ಆಚರಣೆಗಳು ಸಾಂಸ್ಥಿಕ ರಾಜಕಾರಣದ ಜ್ಞಾನಕ್ಕೆ ಸಂಬಂಧಿಸಿದ್ದು, ಜೀವನವನ್ನು ಪಾಂಡಿತ್ಯಪೂರ್ಣವಾಗಿ ವಿಭಾಗ ಮಾಡಿ ಅಧ್ಯಯನಶಿಸ್ತುಗಳ ಮೂಲಕ ತತ್ವಶಾಸ್ತ್ರಜ್ಞರು ಅಭ್ಯಾಸ ಮಾಡಲು ಸಾಧ್ಯ ಎಂದರು. ಅವರು ಅಧ್ಯಯನ ಶಿಸ್ತುಗಳನ್ನು ವ್ಯಾಖ್ಯಾನಿಸುತ್ತಾ 'ಪ್ರತಿಯೊಂದು ಅಧ್ಯಯನ ಶಿಸ್ತುಗಳು ತಮ್ಮ ಸ್ಥಿತಿಗತಿಗಳಿಗೆ ಅಗ್ರಸ್ಥಾನ ನೀಡುತ್ತಾ, ತಮ್ಮ ಕ್ಷೇತ್ರದ ಮಿತಿಯನ್ನು ತೋರಿಸುತ್ತಾ, ಪ್ರತಿಯೊಂದು ಅಂಶವನ್ನು ಸೂಕ್ಷ್ಮವಾಗಿ ಗಮನಿಸುತ್ತದೆ. ಮತ್ತು ತನ್ನ ಸೀಮಿತ ವ್ಯಾಪ್ತಿಯ ಮೂಲಕ ಮಾಪನ ಮಾಡಿ ಬೌದ್ಧಿಕ ಅಂಶಗಳ ಮೂಲಕ ವ್ಯಾಖ್ಯಾನಿಸುತ್ತಿತ್ತು' ಎಂದರು.

ದೈನಂದಿನ ಜೀವನವನ್ನು ಅಂತರ್‌ಶಿಸ್ತೀಯ ಮೂಲಕ ಅಧ್ಯಯನ ಮಾಡುವುದು ಸರಳವಲ್ಲ. ಏಕೆಂದರೆ ಅದು ಈಗಾಗಲೇ ಅಸ್ತಿತ್ವದಲ್ಲಿರುವ ಅಧ್ಯಯನ ಶಿಸ್ತುಗಳನ್ನು ಸುತ್ತುವರಿದಿರುವ ವಿಷಯಗಳನ್ನು ಹಿಂದಿಕ್ಕಿತು. ಕಾರಣ ಅದರ ಇತರೆ ರೂಪಗಳು ಪರಸ್ಪರ ಹೊಂದಿಕೊಂಡಿದ್ದು, ಈಗಾಗಲೇ ಸಮಾಜದಲ್ಲಿ ಅಸ್ತಿತ್ವವನ್ನು ಕಂಡುಕೊಂಡ ವ್ಯವಸ್ಥೆಗಳನ್ನು ಅಂತಿಮವಾಗಿ ಅವುಗಳ ನಡುವಿನ ಸಂಬಂಧವನ್ನು ಕಡಿಮೆ ಮಾಡುವ ಪ್ರಯತ್ನ ಮಾಡಿತು. ಸರಟಿಯಾರವರು ಸಮಕಾಲೀನ ಸಂಸ್ಕೃತಿ ಮತ್ತು ಅದರ ಅನುಭೋಗದ ಬಗ್ಗೆ ದೈನಂದಿನ ಆಚರಣೆಗಳಲ್ಲಿ ಅನಿವಾರ್ಯವಾಗಿ ಹಲವು ವೃತ್ತಾಂತಗಳನ್ನು ಅಪರಿಮಿತವಾಗಿ ಬಳಸುತ್ತಿದ್ದರು. ಇಲ್ಲಿ ಸಾಂಸ್ಕೃತಿಕ ಅಧ್ಯಯನಗಳ ನಡುವೆ ಒಂದು ಒಲವು ಇದ್ದು, ಸಾಹಿತ್ಯದ ಕೃತಿಯಲ್ಲಿ ವಸ್ತುನಿಷ್ಠ ಅಧ್ಯಯನಕ್ಕೆ ಪ್ರಾಮುಖ್ಯತೆ ನೀಡುತ್ತಾರೆ. ಕಾರಣ ಹಳೆಯದಾದ ಮತ್ತು ನಿರ್ದಿಷ್ಟವರ್ಗಾಧಾರಿತ ವಾದ ಸಾಂಸ್ಕೃತಿಕ ಮೌಲ್ಯಗಳ ಬಗ್ಗೆ ಹಲವು ಕಲ್ಪನೆ ಹೊಂದಿದೆ. ಏಕೆಂದರೆ ಸಂಸ್ಕೃತಿಯ ಅಧ್ಯಯನದಲ್ಲಿ ಸಮಕಾಲೀನ ಮೌಲ್ಯಗಳನ್ನು ಜೋಪಾನವಾಗಿಡುವ ಆಧುನಿಕ ಸಮೂಹ ಮಾಧ್ಯಮಗಳು ತಮ್ಮೆಡೆಗೆ ಸೆಳೆದುಕೊಳ್ಳುತ್ತವೆ.

ಅಂತರ್‌ಶಿಸ್ತೀಯ ಎನ್ನುವ ಗ್ರಂಥವು ಪ್ರಶಸ್ತವಾದ, ವಿಜಾತಿರೂಪವಾಗಿದ್ದು, ವಿಭಿನ್ನ ರೀತಿಯ ಬರವಣಿಗೆಯ ಶೈಲಿಯನ್ನು ಜೊತೆಗೆ ಹೊತ್ತು ತಂದಿದ್ದು ಮತ್ತು ಮಾನವ ಅನುಭವದ ವಿಧಗಳನ್ನು ಸಾಂಪ್ರದಾಯಿಕ ಅಧ್ಯಯನ ಶಿಸ್ತುಗಳೊಂದಿಗೆ ಅಧ್ಯಯನ ಮಾಡಲಾಗುತ್ತದೆ. ಸರಟಿಯಾ ಪ್ರಕಾರ 'ಪತ್ಯ ಸಾಹಿತ್ಯವನ್ನು ಅಧ್ಯಯನ ಮಾಡುವುದು ಅನುಕೂಲ' ಏಕೆಂದರೆ ಯಾವಾಗಲೂ ಅನುಭವಗಳು ಆಶಿಸ್ತೀಯ ಅಂಶಗಳನ್ನು ಹೊಡೆದು ಹಾಕುತ್ತವೆ. ಅವರ ಕೃತಿಯು ಹಾಗೆಯೇ, ಅಂತರ್‌ಶಿಸ್ತೀಯ ಎರಡು ಕಾರಣಗಳಗಾಗಿ ಅವಶ್ಯ. ಮೊದಲನೆಯದಾಗಿ ನಿರ್ಲಕ್ಷಕ್ಕೆ ಒಳಪಟ್ಟು ಸಂಸ್ಕೃತಿಯ ಅಂಶಗಳನ್ನು ಅಧ್ಯಯನಕ್ಕಾಗಿ ತೆರೆದಿಡುವುದು. ಎರಡನೆಯದಾಗಿ ಹೆಚ್ಚು ಸಂಪ್ರದಾಯತೆಯನ್ನು ಹೊಂದಿದ ವಸ್ತುಗಳನ್ನು ಸಾಹಿತ್ಯ ಅಧ್ಯಯನದ ವಸ್ತುಗಳಾದ ಭಾಷೆ, ಓದು, ಕಥನ ಇವುಗಳೊಂದಿಗೆ ಸಂಬಂಧ ಕಲ್ಪಿಸುವುದು ಎಂದರು.

## ವರ್ಗ ಮತ್ತು ಪ್ರಧಾನ ಸಂಸ್ಕೃತಿ

ಪಿಯರ್ ಬೊರ್‌ಡಿಯಾರವರು ಸಮಾಜ ವಿಜ್ಞಾನ ಮತ್ತು ಮಾನವಿಕ ಶಾಸ್ತ್ರಗಳ ನಡುವೆ ಇತ್ತೀಚಿನ ವರ್ಷಗಳಲ್ಲಿ ಸ್ಪಷ್ಟವಾಗಿ ಎಲ್ಲೆಯನ್ನು ಗುರುತಿಸಬಲ್ಲ ಪ್ರಭಾವಿಗಳಾಗಿದ್ದಾರೆ. ಬೊರಡಿಯಾರವರ ಕೃತಿ ಮೂಲತಃವಾಗಿ ಸಾಂಸ್ಕೃತಿಕ ಮೌಲ್ಯ ಮತ್ತು ವರ್ಗ ಭೇದಗಳ ನಡುವಿನ ಸಂಬಂಧದ ಬಗ್ಗೆಯೂ ಮಾಹಿತಿಯನ್ನು ಒಳಗೊಂಡಿತು. ತಮ್ಮ ಕೃತಿಯಲ್ಲಿ ಎತ್ತುವ ಪ್ರಶ್ನೆ ಸಮಾಜದ ಎಲ್ಲಾ ಸಂಸ್ಕೃತಿಯ ರೂಪದಲ್ಲಿ ಶಾಶ್ವತವಾಗಿ ಕಂಡುಬಂದಿದ್ದು, ಅಲ್ಲಿನ ಜನರು ನಿರ್ದಿಷ್ಟ ವಿಧದ ಆಹಾರ ಸೇವಿಸುವುದು, ರಜಾದಿನಗಳನ್ನು ಕಳೆಯಲು ಮುಂದಾಲೋಚನೆ ಮಾಡುವುದು, ಸಿನೆಮಾ ಮಂದಿರಗಳಿಗೆ ಹೋಗುವುದು, ಹೊಸ ಕಾದಂಬರಿಗಳನ್ನು ಓದುವುದು, ಮುಂತಾದ ಸಾಂಸ್ಕೃತಿಕ ಆದರ್ಶಗಳ ಬಗ್ಗೆ ಮಾಹಿತಿ ನೀಡುತ್ತದೆ. ಬೊರಡಿಯಾರವರ ಗ್ರಂಥವು ಕಲೆ ಮತ್ತು ಸಾಹಿತ್ಯದ ಅಂಶಗಳನ್ನು ವಿಮರ್ಶಿಸುವುದನ್ನು ಪ್ರತಿನಿಧಿಸುತ್ತಿತ್ತು. ಆ ಮೂಲಕ ಸಮಾಜದ ರಚನೆ ಮತ್ತು ಸಾಮಾಜಿಕ ಕಳಕಳಯೊಂದಿಗೆ ವರ್ಗ ಮತ್ತು ಅಸಮಾನತೆ ಎಂಬ ಭಿನ್ನ ಸಂಸ್ಕೃತಿಯ ಚಟುವಟಿಕೆಗಳೊಂದಿಗೆ ಹೊಂದಿರುವ ಸಂಬಂಧವನ್ನು ಪರಿಶೀಲಿಸುವುದು.

ಬೊರಡಿಯಾರವರು ಕ್ಷೇತ್ರ ಅಧ್ಯಯನದ ಮೂಲಕ ವ್ಯಕ್ತಿಗಳ ಆಂತರಿಕ ಅಂಶಗಳು, ತಾಂತ್ರಿಕ ಅಂಶ ಮತ್ತು ಬೇರೆ ಬೇರೆ ರೂಪದ ಪ್ರಧಾನ ಸಂಸ್ಕೃತಿ ಅಂಶಗಳೊಂದಿಗೆ ಹೋರಾಟ ಮಾಡಿ ಸ್ಥರವಿನ್ಯಾಸದ ಸಂಬಂಧವನ್ನು ಸೃಷ್ಟಿಸಿತು. ಅದರಲ್ಲಿ ಆರ್ಥಿಕ, ರಾಜಕೀಯ, ಸಾಮಾಜಿಕ ಅಂಶಗಳದ್ದವು. ಆದ್ದರಿಂದ ಸಾಂಸ್ಕೃತಿಕ ಉತ್ಪಾದಕರು ಬಹುತೇಕ ಸ್ವಾಯುತರಾಗಿದ್ದಲ್ಲಿ, ತಮ್ಮನ್ನು ತಾವು ಇತರೆಯವರಿಂದ ಬೇರ್ಪಡಿಸಿಕೊಂಡು ಇತರೆ ಪ್ರಧಾನ ರೂಪದ ಸಂಸ್ಕೃತಿಯ ಶಕ್ತಿಯನ್ನು ಸಂಪಾದಿಸಿಕೊಳ್ಳುತ್ತಾರೆ. ಹಾಗೆಂದು ಎಲ್ಲಾ ಸಾಂಸ್ಕೃತಿಕ ಉತ್ಪಾದನೆಗಳನ್ನು ಕುರುಡಾಗಿ ಒಪ್ಪಿಕೊಳ್ಳದೆ ಸ್ವ-ಹಿತಾಸಕ್ತಿಯ ಮೂಲಕ ಅರ್ಥಶಾಸ್ತ್ರದಲ್ಲಿ ಪ್ರಧಾನ ಸಂಸ್ಕೃತಿಯನ್ನು ಸರಳವಾಗಿ ಗುರುತಿಸಲಾಗದೆ ಧರ್ಮ ಸಮ್ಮತವಾದದ್ದನ್ನು ಮಾತ್ರ ಅಳವಡಿಸಿಕೊಳ್ಳಲಾಗಿದೆ ಎಂದರು.

ಸಾಂಸ್ಕೃತಿಕ ಅನುಭೋಗವು ನಮ್ಮ ಅಭಿಲಾಷೆ, ಅಭಿರುಚಿ ಮತ್ತು ಭೇದಗಳ ಮೇಲೆ ಸ್ಪಷ್ಟಗುರಿಯನ್ನು ಹೊಂದಿದ್ದು, ಸಾಮಾಜಿಕ ಏಣಿಶ್ರೇಣಿಗಳೊಳಗೆ ನಾವು ವಾಸಿಸುವ ಸಮಾಜಕ್ಕೆ ಸಂಬಂಧಿಸಿದ ಅವಶ್ಯಕತೆಯನ್ನು ಪೂರೈಸುತ್ತದೆ ಎಂಬುದನ್ನು ತೋರಿಸುತ್ತಾರೆ. ಓದುಗರು ಹಲವು ರೀತಿಯ ಪಥ್ಯ ಆರಿಸಿಕೊಳ್ಳುತ್ತಾರೆ. ಅದಕ್ಕೆ ಕಾರಣ ಅವರೊಳಗಿರುವ ವಿವಿಧ ಪ್ರಧಾನ ಸಂಸ್ಕೃತಿ. ಅದನ್ನು ಸರಳವಾಗಿ ಬೊರಡಿಯಾರವರು 'No way out of the Game of culture' ಎಂದಿದ್ದಾರೆ.

ಅಂತರ್‌ಶಿಸ್ತೀಯುದ ಬಗ್ಗೆ ನಿಜವಾಗಿಯೂ ಆಸಕ್ತಿ ಇದ್ದಿದ್ದೆ ಆದರೆ ಸಮಾಜಶಾಸ್ತ್ರೀಯವಾಗಿ ಸಮಕಾಲಿನ ಸಂಸ್ಕೃತಿಯನ್ನು ಹೇಗೆ ಸ್ವೀಕರಿಸಬೇಕು, ಅದನ್ನು ಹೇಗೆ ಉತ್ಪಾದಿಸಬಹುದು ಎಂಬುದನ್ನು ತೋರಿಸಬೇಕಾಗುತ್ತದೆ. ಈ ವಿಚಾರವು ಸಂಸ್ಕೃತಿಯ ಪಥ್ಯ, ಸಾಹಿತ್ಯ ಮತ್ತು ಬೌದ್ಧಿಕ ಆಚರಣೆಗಳ ಬಗ್ಗೆ ಸ್ಪಷ್ಟವಾಗಿ ಅಂತರ್‌ಶಿಸ್ತೀಯ ಅಧ್ಯಯನದ ಸಾಧ್ಯತೆಯನ್ನು ತೆರೆದಿಡುತ್ತದೆ. ಬೊರ್‌ಡಿಯಾರವರು ಎನ್‌ಸೈಕ್ಲೋಪಿಡಿಯಾದಲ್ಲಿ ಉದಹರಿಸುವಂತೆ ಸಂಸ್ಕೃತಿ, ಪ್ರಾಮುಖ್ಯತೆ ಮತ್ತು ವ್ಯಕ್ತಿಗಳ ಅಂತಸ್ತು ಇವುಗಳ ನಡುವೆ ಇರುವ ಸಂಬಂಧವನ್ನು ಸಂಖ್ಯಾಶಾಸ್ತ್ರೀಯ ಪಟ್ಟಿ ಮತ್ತು ನಕ್ಷೆಗಳ ಮೂಲಕ ತೋರಿಸುವುದು. ನಿರಂತರ ಪರಂಪರೆಯನ್ನು ಸೃಷ್ಟಿಸುತ್ತದೆ. ಈ ಮೂಲಕ ಸಮಾಜಶಾಸ್ತ್ರವನ್ನು ಒಂದು ವಿಜ್ಞಾನ ಎಂದು ವಿಚಾರ ಮಾಡಿದಂತೆ ಎಂದಿದ್ದಾರೆ.

ಬೊರ್‌ಡಿಯಾರವರು ತಮ್ಮ ಇತ್ತೀಚಿನ ಕೃತಿಯಾದ 'doxosophes' ನಲ್ಲಿ ಸಂಸ್ಕೃತಿಯ ಪ್ರಧಾನತೆಯಲ್ಲಿ ಆದ ಬದಲಾವಣೆಯನ್ನು ವ್ಯಕ್ತಪಡಿಸಿ ಪ್ರಕಟಿಸಿದ್ದರು. ಇದನ್ನೆ ಶಾಲಾ, ಕಾಲೇಜುಗಳು ಅದರಲ್ಲಿರುವ ಸ್ವಾಯತ್ತ ಸಂಪ್ರದಾಯದ ಮತ್ತು ಸ್ವತಂತ್ರವನ್ನು ಸವಾಲಾಗಿ ಸ್ವೀಕರಿಸಿದವು. ಈ ಸ್ವಾತಂತ್ರದಿಂದಾಗಿಯೇ ಮಾಧ್ಯಮಗಳಲ್ಲಿ ಬರುವ ಪೂರ್ವಗ್ರಹದಲ್ಲಿ ಮತ್ತು ಸಂಸ್ಕೃತಿಯ ಪರಿಕಲ್ಪನೆಯಲ್ಲಿ ಬದಲಾವಣೆಯಾಯಿತು. ಇದರಿಂದ 'ಸ್ಥರವಿನ್ಯಾಸದಲ್ಲಿನ ಬಾಗಶಃ ಕ್ರಾಂತಿಯು' ಮಾಧ್ಯಮಗಳ ಹೊಸ ಸಂಸ್ಕೃತಿ ಮತ್ತು 'ನ್ಯಾಯ ಸಮ್ಮತ ಸಮೂಹ ಸಂಸ್ಕೃತಿಯ ಉತ್ಪತ್ತಿ ಇವುಗಳ ನಡುವೆ ಸಾಮಾನ್ಯ ಶ್ರೇಣಿಯನ್ನು ಹುಟ್ಟುಹಾಕಿತು.

ಈ ಮೇಲಿನ ಹೇಳಿಕೆಯನ್ನು ಡೇವಿಡ್ ಸ್ಟುವರ್ಟ್‌ರವರು ಉಲ್ಲೇಖಿಸುತ್ತಾ ಈ ಕೃತಿಯು ಉದ್ರೇಕಕಾರಿಯಾಗಿದ್ದು, ಅವರ ಕ್ಷೇತ್ರ ಸಿದ್ಧಾಂತದಲ್ಲಿ ಸ್ಥರವಿನ್ಯಾಸ ಮತ್ತು ಸಾಂಸ್ಕೃತಿಕ ಅಂತರದ ತಾತ್ಕಾಲಿಕ ಸ್ವರೂಪವು ಮುಖವಾಡ ರಹಿತವಾಗಿದೆ ಎಂದಿದ್ದಾರೆ. ಇದು ಅಂತರ್‌ಶಿಸ್ತೀಯ ಮೂಲವೃತ್ತಿಯ ಅಧ್ಯಯನಕ್ಕೆ ಮುಕ್ತ ದಾರಿ ತೋರುತ್ತದೆ. ಲೇಖಕರು ಮತ್ತು ಬುದ್ಧಿಜೀವಿಗಳು, ಸಂಸ್ಕೃತಿ ಮತ್ತು ಸಮಾಜದ ನಡುವೆ ಸಂಬಂಧವನ್ನು ಕಲ್ಪಿಸಿ, ಏಣಿಶ್ರೇಣಿ ಮತ್ತು ಅಂತರಗಳನ್ನು ಭದ್ರಪಡಿಸಿಕೊಳ್ಳುವಲ್ಲಿ ತೊಡಗಿಸಿಕೊಂಡಿದ್ದಾರೆ ಎಂಬುದನ್ನು ತಿಳಿಸುತ್ತಾರೆ.

# ಸಾಂಸ್ಕೃತಿಕ ಮೌಲ್ಯ ಮತ್ತು ಜ್ಞಾನವರ್ಗ

ಆಸ್ಟ್ರೇಲಿಯಾದ ಸಾಂಸ್ಕೃತಿಕ ವಿಮರ್ಶಕ ಜಾನ್ ಪ್ರೊ ರವರು ಸಂಸ್ಕೃತಿಯ ಅಧ್ಯಯನ ಮತ್ತು ಸಾಂಸ್ಕೃತಿಕ ಮೌಲ್ಯಗಳನ್ನು ಪ್ರಶ್ನೆ ಮಾಡುತ್ತಾ, ಸಂಸ್ಕೃತಿ ಎಂದರೆ 'ಜೀವನ ನಡೆಸುವ ರೀತಿ' ಎಂದರು. ಸಮಾಜದ ಜನರು ಸದಾ ಮೇಲ್ವರ್ಗದ ಜನರ ಸಾಂಸ್ಕೃತಿಕ ಮೌಲ್ಯಗಳನ್ನು ಅನುಸರಿಸುತ್ತಾರೆ. ಅದನ್ನು ಸೌಂದರ್ಯ ಗುಣ ಗ್ರಾಹಕತೆಯುಳ್ಳ ಸಂಸ್ಕೃತಿಯನ್ನಾಗಿ ನವೀಕರಿಸುತ್ತಾರೆ. ಇದರಲ್ಲಿ ಸಾಮಾಜಿಕ ಮತ್ತು ಆರ್ಥಿಕ ಅಂಶಗಳನ್ನು ಸೇರಿಸಲು ಇಚ್ಚಿಸುತ್ತಾರೆ. ಅವುಗಳು ಸಹ ಸಾಹಿತ್ಯ ಅಧ್ಯಯನಗಳಲ್ಲಿ ಸಾಂಪ್ರದಾಯಿಕ ಅಂತರ್‌ಶಿಸ್ತೀಯ ಕಲ್ಪನೆಗೆ ದಾರಿಯಾಗುತ್ತದೆ. ಪ್ರೊ ರವರ ಸಂಸ್ಕೃತಿಯ ಮೌಲ್ಯದ ಬಗೆಗಿನ ಕಳಕಳಿಯು ಅಂತರ್‌ಶಿಸ್ತೀಯ ಒಳಗೊಂಡ ಅಂಶವನ್ನು ಪ್ರಶ್ನೆ ಮಾಡುತ್ತದೆ. ಅದರಲ್ಲಿ ಮೊದಲು ಸಂಸ್ಕೃತಿಯನ್ನು 'ಮೇಲು', 'ಮಧ್ಯಮ' ಮತ್ತು 'ಕೀಳು' ಎಂದು ವರ್ಗೀಕರಿಸಿ ಅವುಗಳ ನಡುವೆ ಭಿನ್ನತೆಗೆ ಕಾರಣವಾಗುವ ಅಂಶಗಳನ್ನು ಕಂಡುಕೊಂಡು ಸಾಂಸ್ಕೃತಿಕ ಮೌಲ್ಯದಲ್ಲಿರುವ ಬೇರೆ ಬೇರೆ ಸಾಧ್ಯತೆಗಳನ್ನು ಪರಿಶೀಲಿಸಬೇಕಾಗುವುದು ಎಂದಿದ್ದಾರೆ.

ಆಧುನಿಕ ಬಂಡವಾಳಶಾಹಿ ಸಮಾಜಗಳು ಸಂಸ್ಕೃತಿ ಮತ್ತು ವರ್ಗ ಇವುಗಳ ಅಂತರವನ್ನು ಪ್ರತ್ಯೇಕಿಸುತ್ತವೆ. ಇದರಿಂದ ಸಂಸ್ಕೃತಿಯಲ್ಲಿರುವ ಮೇಲು, ಕೀಳು ಎಂಬ ವಿಭಾಗವು ಮುರಿದು ಬೀಳುತ್ತದೆ. ಇದಕ್ಕೆ ಕಾರಣವಾಗುವ ಅಂಶಗಳು ಎಂದರೆ ಆಧುನೀಕರಣ ಮತ್ತು ಪ್ರಜಾಪ್ರಭುತ್ವ ಅಥವಾ ಸ್ವತಂತ್ರ ಆಧುನಿಕ ಸಮಾಜದಲ್ಲಿ ಗತಕಾಲದ ಪ್ರಧಾನ ಸಂಸ್ಕೃತಿಯೂ ಕೂಡ ಈ ಮೇಲಿನ ಅಂಶಗಳಿಂದಾಗಿ ನಾಶವಾಗುತ್ತದೆ. ಅಲ್ಲದೆ ಆಧುನೀಕರಣದ ನೋಟವು ಮೇಲ್‌ವರ್ಗದ ಲೇಖಕರು, ಪ್ರಕಾಶಕರು ಮತ್ತು ಮಾಧ್ಯಮಗಳಿಂದ ಪುರಸ್ಕಾರಕ್ಕೆ ಒಳಗಾಗುವವರಿಗೆ ಅವಕಾಶಮಾಡಿಕೊಡುತ್ತ 'ಮಹಾನ್' ಎಂಬ ಹಣೆಪಟ್ಟಿ ಕಟ್ಟಿಕೊಂಡ ಲೇಖಕರಾದ ಷೇಕ್ಸ್‌ಪಿಯರ್, ಡಿ.ಕಾಸ್ಟ ಮತ್ತು ಜಾನ್ ಅಸ್ಟೇನ್ ನಂತಹ ಲೇಖಕರು ಸಹ ದೂರದರ್ಶನ ಮತ್ತು ಸಿನೆಮಾ ಮಾಧ್ಯಮಗಳೊಂದಿಗೆ ಹೊಂದಿಕೊಂಡರು.

ಜಾನ್ ಪ್ರೊ ರವರ ಮುಖ್ಯ ಗುರಿ ಜ್ಞಾನ ವರ್ಗಗಳನ್ನು ಗುರುತಿಸುವುದು. ಈ ನಿಟ್ಟಿನಲ್ಲಿ ಅವರು ಪ್ರಜ್ಞಾವಂತರ ಆಸಕ್ತಿಯನ್ನು ಸಾಂಸ್ಕೃತಿಕ ಅಧ್ಯಯನಗಳಲ್ಲಿ ತೊಡಗಿಸುತ್ತಾರೆ. ಅದಕ್ಕಾಗಿ ಸಂಸ್ಕೃತಿ ಅಧ್ಯಯನದೊಳಗೆ ಹಕ್ಕು ಸ್ಥಾಪಿಸಿಕೊಳ್ಳಲು ತಮ್ಮ ಕೈ ಕೆಳಗಿನವರ ಮತ್ತು ಶಾಲಾ ಕಾಲೇಜುಗಳ ಹೊರಗಿನ ಅಂಚಿನಲ್ಲಿರುವ ಸಂಸ್ಕೃತಿಯ ಆಧಾರದ ಮೇಲಿನ ತಪ್ಪು ಕಲ್ಪನೆಗಳು ಪ್ರಜ್ಞಾವಂತರ ಉತ್ಪಾದಕ ನಿಯಮಾವಳಿಗಳನ್ನು ದಾಟಿ ಹೋಗುವ ಸಾಧ್ಯತೆಯನ್ನು "ಸ್ವ-ಸೇವಾ ವ್ಯತ್ಯಾಸ", "ವಾಸ್ತವ ಪ್ರಜ್ಞಾವಂತರು" ಮತ್ತು "ಮಿಥ್ ಪ್ರಜ್ಞಾವಂತರ"ನ್ನು ಅವಲಂಬಿಸಿದೆ. ಆದ್ದರಿಂದ ಬೌದ್ಧಿಕತೆ ಎನ್ನುವುದು ಆತ್ಮವಿಮರ್ಶೆ ಎಂದಿದ್ದಾರೆ. ಇದರಿಂದಾಗಿ ಬೌದ್ಧಿಕ ಪ್ರಜ್ಞಾವಂತರು ಸಮಾಜದಲ್ಲಿ ಪ್ರಜ್ಞಾವಂತಿಕೆಯಿಂದಲೇ ಮಾತಾಡಬೇಕು ಮತ್ತು ಅದು ಅವರ ಓದುಗರನ್ನು ಉದ್ದೇಶಿಸಿರಬೇಕು. ಈ ಪ್ರಯತ್ನವು ಬೌದ್ಧಿಕ ಪ್ರಜ್ಞಾವಂತರಿಗೆ ತಿಳಿ ಹೇಳುವ ಒಂದು ವಿಧವಾಗಿದೆ. ಸಾರ್ವಜನಿಕ ಜ್ಞಾನವನ್ನು ಅಧ್ಯಯನ ಶಿಸ್ತುಗಳಿಗೆ ಸಂಬಂಧಿಸಿದ ಯಾವುದೇ ಚರ್ಚೆಯಲ್ಲಿ ಮತ್ತು ಅಂತರ್‌ಶಿಸ್ತೀಯ ಕ್ಷೇತ್ರದ ಸಮರ್ಥ ಪಾತ್ರವನ್ನು

ಅರ್ಥಮಾಡಿಕೊಳ್ಳಬಹುದು. ಇಲ್ಲಿ ಅಧ್ಯಯನ ಶಿಸ್ತುಗಳಲ್ಲದೆ ಜ್ಞಾನಶಾಖೆಗಳನ್ನು ನೋಡಲು ಸಾಧ್ಯವಿಲ್ಲ. ಆದ್ದರಿಂದ ಅಂತರ್‌ಶಿಸ್ತೀಯ ಕ್ಷೇತ್ರದ ಮೂಲಕ ಅಧ್ಯಯನ ಶಿಸ್ತುಗಳನ್ನು ವಿವರಿಸುವ ಪ್ರಯತ್ನ ಮಾಡಿದ್ದಾರೆ.

ಮಾನವಿಕ ಶಾಸ್ತ್ರಗಳೊಳಗೆ ಅಂತರ್‌ಶಿಸ್ತೀಯ ಅಧ್ಯಯನವು ಯಾವುದೇ ಭೇದ ಭಾವವಿಲ್ಲದೆ ದೋಷಯುಕ್ತ ಪ್ರಧಾನವಾದ ವ್ಯಾಖ್ಯಾಯನದ ಕ್ರಿಯಾ ಮಾಲೆಯನ್ನೆ ಸೃಷ್ಟಿಸುತ್ತದೆ. ಅಂತರ್‌ಶಿಸ್ತೀಯದ ರೂಪವಾಗಿ ಅವರು ಸೂಚಿಸುವುದು ಸಾಂಸ್ಕೃತಿಕ ಅಧ್ಯಯನದ ಉಲ್ಲೇಖನ ಕ್ಷೇತ್ರವನ್ನು. ಇದರ ಗುರಿ ಮಾನವಿಕ ಅಧ್ಯಯನ ಶಿಸ್ತುಗಳಲ್ಲಿ ಏಕರೂಪತೆ ತರುವುದು ಇಲ್ಲವೆ ಅವುಗಳನ್ನು ಇನ್ನು ಉನ್ನತ ದರ್ಜೆಗೆ ಏರಿಸುವುದು. ಅಂತರ್‌ಶಿಸ್ತೀಯದ ಅಧ್ಯಯನ ಶಿಸ್ತುಗಳು ಆಗಾಗೆ ಸಂಸ್ಕೃತಿಯ ಅಧ್ಯಯನಗಳನ್ನು ಸ್ಪಷ್ಟವಲ್ಲದೆ ಇದ್ದರೂ ಸಮಗ್ರವಾದ ದೃಷ್ಟಿಯಲ್ಲಿ ಅದರ ಅರ್ಥವನ್ನು ಬಿಂಬಿಸುವುದಾಗಿದೆ. ಒಂದುಕಡೆ ಸಂಸ್ಕೃತಿಯ ಅಧ್ಯಯನಗಳನ್ನೆಲ್ಲಾ ಒಟ್ಟುಕೂಡಿಸಿಕೊಂಡು, ಇನ್ನೊಂದು ಕಡೆ ಅಂತರ್‌ಶಿಸ್ತೀಯ ಅಧ್ಯಯನವನ್ನು ಪ್ರತಿಪಕ್ಷವನ್ನಾಗಿಸಿ ಅವುಗಳಲ್ಲಿ ಶಕ್ತಿ ಸಂಬಂಧ ಮತ್ತು ಜ್ಞಾನವನು ಸಂಘಟಿಸುವ ಪ್ರಯತ್ನ ಮಾಡುವುದನ್ನು ಅನಿವಾರ್ಯವಾಗಿ ಇಂದು ನೋಡಬೇಕಾಗಿದೆ.

ಈ ಮೂಲಕ ಪ್ರಾರಂಭದಿಂದ ಇಂದಿನವರೆಗೆ ಸಾಂಸ್ಕೃತಿಕ ಅಧ್ಯಯನ ವಿಷಯಗಳು ಚರ್ಚಾಸ್ಪದವಾಗಿ ಉಳಯುತ್ತವೆ. ರೀಡಿಂಗ್ಸ್, ಪ್ರೋ ಮತ್ತು ಬೆನೆಟ್‌ರವರು ಸೂಚಿಸುವಂತೆ ಸಾಂಸ್ಕೃತಿಕ ಅಧ್ಯಯನಗಳು ದುಬಾರಿಯಾದ ಲಕ್ಷಣ ಹೊಂದಿರುವುದರಿಂದಲೇ ಅವು ಪ್ರಧಾನವಾಗಿದೆ. ಮೇಲ್ವರ್ಗದವರಲ್ಲಿ ಸಂಪ್ರದಾಯಸ್ತ, ಮಾನವಿಕ ವಿಷಯಗಳ ಬಹಿಷ್ಕರಣೆ ಮತ್ತು ಮಿತಿಯನ್ನು ದಾಟಿ ಹೋಗುವ ಪ್ರಯತ್ನವಾಗಿದೆ. ಇಲ್ಲಿ ಅಂತರ್‌ಶಿಸ್ತೀಯ ಅಧ್ಯಯನ ಶಿಸ್ತುಗಳು ಒಂದಾಗಿ ಸೇರಲು ಹೇಗೆ ಸಮರ್ಥವಾಗಿದೆ ಎಂಬುದನ್ನು ತಿಳಸುತ್ತದೆ. ಇದು ಸಾಂಸ್ಕೃತಿಕ ಅಧ್ಯಯನಗಳೊಂದಿಗೆ ವಿಶೇಷವಾದ ಗ್ರಹಿಕ ಶಕ್ತಿಯ ವಿಧವಾಗಿದೆ. ಇಲ್ಲದಿದ್ದರೆ ಅದು ಹೆಚ್ಚು ಅಂತರ್‌ಗತವಾದ ಅಂತರ್‌ಶಿಸ್ತೀಯ ದೃಷ್ಟಿಕೋನ ಹೊಂದಿರುವ ಮಾನವಿಕ ಅಧ್ಯಯನ ಶಿಸ್ತಾಗಿ ರೂಪುಗೊಳ್ಳುತ್ತದೆ.

ಈ ಮೇಲಿನ ಎಲ್ಲಾ ಅಂಶಗಳನ್ನು ಗಮನದಲ್ಲಿಟ್ಟುಕೊಂಡು ಅಂತರ್‌ಶಿಸ್ತೀಯ ಅಧ್ಯಯನದ ಮೂಲಕ ಸಾಹಿತ್ಯದಲ್ಲಿ ಸಮಾಜಶಾಸ್ತ್ರೀಯ ವಿಷಯಗಳು ಹೇಗೆ ಹಾಸುಹೊಕ್ಕಾಗಿರುತ್ತವೆ ಎಂಬುದನ್ನು ತಿಳಯಲು ಕುವೆಂಪುರವರ ಕಾನೂರು ಹೆಗ್ಗಡತಿ ಕಾದಂಬರಿಯಲ್ಲಿನ ಪಾತ್ರಗಳು, ಸನ್ನಿವೇಶಗಳು, ಅವರ ದೃಷ್ಟಿಕೋನವನ್ನು ಅಧ್ಯಯನದ ಸಲುವಾಗಿ ಆರಿಸಿಕೊಳ್ಳಲಾಗಿದೆ. ಈ ಕಾದಂಬರಿಯನ್ನು ಕೇವಲ ಮನೋರಂಜೆಗಾಗಿ ಸೃಷ್ಟಿಸಿಲ್ಲ. ಬದಲಾಗಿ ಒಂದು ಕಾಲದಲ್ಲಿ ಸಮಾಜದಲ್ಲಿನ ಕೆಲವು ಕುಟುಂಬಗಳ ಜೀವನ ಚಿತ್ರಣವನ್ನು ನೀಡುವುದು ಉದ್ದೇಶವಾಗಿದೆ. ಅದೇ ರೀತಿ ಎಲ್ಲರೂ ಕೂಡ ಒಂದಲ್ಲ ಒಂದು ಕಡೆ ಎಲ್ಲಾ ಕಾಲದಲ್ಲೂ ಶೋಷಣೆಗೆ ಒಳಗಾಗಿದ್ದಾರೆ ಇಲ್ಲವೆ ಒಳಗಾಗುವವರಿದ್ದಾರೆ ಎಂಬುದು ಕಾದಂಬರಿಯ ಸಂದೇಶ. ಅದನ್ನು ಅಂತರ್‌ಶಿಸ್ತೀಯ ಅಧ್ಯಯನ ವಿಧಾನದ ಮೂಲಕ ಅಭ್ಯಾಸಿಸಲಾಗುವುದು. ಮುಂದಿನ ಅಧ್ಯಾಯಗಳು ಆ ಬಗ್ಗೆ ವಿವರಣೆ ನೀಡುತ್ತವೆ.

# ಅಧ್ಯಾಯ - 3

## ವಿವಾಹ

### ವಿವಾಹದ ಪರಿಕಲ್ಪನೆ ಮತ್ತು ಆಚರಣೆ

### ಕುವೆಂಪುರವರ ಕಾನೂರು ಹೆಗ್ಗಡತಿ ಕಾದಂಬರಿಯಲ್ಲಿ ಚಿತ್ರಿತವಾದಂತೆ.

ಹೂವಯ್ಯ ಮತ್ತು ರಾಮಯ್ಯ ಎಂಬ ಎರಡು ಪಾತ್ರಗಳ ಮೂಲಕ ಕಾದಂಬರಿಕಾರರು ಮಲೆನಾಡಿನ ವಿಸ್ಮಯಲೋಕವನ್ನು ಪ್ರವೇಶಿಸುತ್ತಾರೆ. ಈ ಪಾತ್ರಗಳು ಮೊದಲೇ ಮಲೆನಾಡಿನಲ್ಲಿ ಹುಟ್ಟಿ ಬೆಳೆದವರು ಆ ಕಾಲದಲ್ಲಿ ಎಲ್ಲಾ ಶ್ರೀಮಂತ ಮಲೆನಾಡಿನ ಒಕ್ಕಲಿಗ ಕುಟುಂಬದವರು ತಮ್ಮ ಮಕ್ಕಳ ವಿದ್ಯಾಭ್ಯಾಸಕ್ಕಾಗಿ ನಗರಕ್ಕೆ ಕಳುಹಿಸುವುದು ವಾಡಿಕೆ. ಕೆಲವರು ಸಮೀಪದ ನಗರ ಶಿವಮೊಗ್ಗಕ್ಕೆ ಕಳುಹಿಸಿದರೆ ಉಳಿದವರು ಹೆಚ್ಚಿನದಾಗಿ ಮೈಸೂರಿಗೆ ಕಳುಹಿಸುತ್ತಿದ್ದರು. ಹಾಗೆ ಹೋದವರಲ್ಲಿ ರಾಮಯ್ಯ ಮತ್ತು ಹೂವಯ್ಯರು ಸೇರಿರುತ್ತಾರೆ. ಆದರೆ ಬೇರೆಲ್ಲ ಯುವಕರ ಹಾಗೆ ಇವರಲ್ಲ. ಪದವಿಯೊಂದಿಗೆ ಜ್ಞಾನ ಸಂಪಾದನೆಯ ಆಸಕ್ತಿ ಹೊತ್ತವರು ಹಾಗಾಗಿ ದೇಶ, ವಿದೇಶಗಳ ಲೇಖಕರ ಪುಸ್ತಕಗಳನ್ನೆಲ್ಲ ಓದಿ ತಿಳಿದುಕೊಂಡು ಅದನ್ನು ತಮ್ಮ ಜೀವನದಲ್ಲಿಯೂ ಅಳವಡಿಸಿಕೊಳ್ಳಲು ಪ್ರಯತ್ನಿಸಿದವರು.

ಇವರಿಬ್ಬರು ಮೈಸೂರಿಗೆ ಹೋಗುವ ಮೊದಲೆ ಮಲೆನಾಡಿನ ಪರಿಸರದಲ್ಲಿ ಅಗಾಧ ಬದಲಾವಣೆಯು ಪ್ರಾರಂಭವಾಗಿತ್ತು. ವಸಾಹತು ಶಾಹಿಯ ಪ್ರಭಾವದಿಂದಾಗಿ ಈ ಭಾಗದಲ್ಲಿ ಆಸ್ಪತ್ರೆಗಳು, ಶಾಲೆಗಳು, ವಸತಿ ಶಾಲೆಗಳು ಪ್ರಾರಂಭವಾಗಿದ್ದವು. ಕೇವಲ ಕುಡಿಯಲು ಕಷಾಯ ಮಾತ್ರ ತಿಳಿದಿದ್ದವರಿಗೆ ಕಾಫಿಯ ಪರಿಚಯವಾಗಿತ್ತು. ಗಳಿಗೆ ಬಟ್ಟಲಿನಲ್ಲಿ ಸಮಯ ನೋಡುತ್ತಿದ್ದವರಿಗೆ ಗಡಿಯಾರದ ಪರಿಚಯವಾಯಿತು. ಹೋಟೆಲ್‌ಗಳು ಅಸ್ತಿತ್ವಕ್ಕೆ ಬಂದಿದ್ದವು. ಓಡಾಡಲು ಸಾರಿಗೆ ಎಂದರೆ ಎತ್ತಿನ ಗಾಡಿ ಮಾತ್ರ ಇತ್ತು. ಆದರೆ ಅದಕ್ಕೆ ಹೊಸ ಸೇರ್ಪಡೆಯಾಗಿ ಸೈಕಲ್ಲುಗಳು ಬಂದವು. ಇವೆಲ್ಲವೂ ಮಲೆನಾಡಿನಲ್ಲಿ ಸಾಮಾಜಿಕವಾಗಿ, ಆರ್ಥಿಕವಾಗಿ, ರಾಜಕೀಯವಾಗಿ ಮತ್ತು ಧಾರ್ಮಿಕ ಹಾಗೂ ಸಾಂಸ್ಕೃತಿಕ ಬದಲಾವಣೆಯನ್ನು ಜನರ ಜೀವನದಲ್ಲಿ ಉಂಟುಮಾಡಿತು. ಹಾಗಾಗಿ ಪ್ರಾಥಮಿಕ ಶಿಕ್ಷಣವನ್ನು ಇಲ್ಲಿ ಮುಗಿಸಿದ ಇವರು ಉನ್ನತ ಶಿಕ್ಷಣಕ್ಕಾಗಿ ಮೈಸೂರಿನ ಕಡೆ ಮುಖ ಮಾಡುತ್ತಾರೆ. ಆದರೆ ಕಾಲೇಜಿನ ಮಧ್ಯಮಾವಧಿ ರಜೆಯ ಕಾರಣ ಹಳ್ಳಿಗೆ ಮರಳಿರುತ್ತಾರೆ. ಬರುವಾಗ ತಮ್ಮೊಂದಿಗೆ ಅಗಾಧವಾದ ಜ್ಞಾನ ಸಂಪತ್ತು, ಆದರ್ಶಗಳನ್ನು ಹೊತ್ತು ತಂದಿರುತ್ತಾರೆ.

ಆದರೆ ಪರಿಸರ ವ್ಯಕ್ತಿಯ ಜೀವನದ ಮೇಲೆ ಹೇಗೆ ಪ್ರಭಾವ ಬೀರುತ್ತದೆ ಎಂಬುದಕ್ಕೆ ಜೀವಂತ ನಿದರ್ಶನವಾಗಿ ಇವರು ನಿಲ್ಲುತ್ತಾರೆ. ಹಲವಾರು ಆದರ್ಶಗಳು, ಕಣ್ಣು ತುಂಬಾ

ಸುಧಾರಣೆಯ ನೋಟಗಳು ಹೊತ್ತು ತಂದವರನ್ನು ಸಂಪೂರ್ಣ ನಿರ್ವೀರ್ಯರನ್ನಾಗಿ ಮಾಡುತ್ತದೆ. ರಾಮಯ್ಯ ತನ್ನೆಲ್ಲ ಓದನ್ನು ಮರೆತು ಪರಿಸ್ಥಿತಿಯ ಕೈಗೊಂಬೆಯಾಗಿ ಆತ್ಮಹತ್ಯೆಯ ಹಾದಿ ಹಿಡಿದರೆ ಇನ್ನು ಹೂವಯ್ಯ ಇದ್ದಿದ್ದರಲ್ಲೆ ಪರಿಸ್ಥಿತಿಯನ್ನು, ಸುತ್ತಲಿನ ಸಮಾಜವನ್ನು ಎದುರಿಸುತ್ತಾ ತನ್ನ ಆದರ್ಶವನ್ನು ಮೆರೆಯುತ್ತಾನೆ.

ಈ ಇಬ್ಬರ ಹಾದಿ ಬೇರೆಯಾಗಲು ಕಾರಣವಾಗುವುದೇ ಒಂದು ವಿವಾಹದ ವಿಚಾರ. ಇಬ್ಬರು ಒಂದೇ ಹೆಣ್ಣಿನ ಮೇಲೆ ಮೋಹಿತರಾಗುತ್ತಾರೆ. ಆದರೆ ವಿಪರ್ಯಾಸ ಎಂದರೆ ಹುಡುಗಿ ಇಷ್ಟಪಟ್ಟ ಗಂಡನ್ನ ಮನೆಯವರು ಇಷ್ಟಪಡದೆ, ಮನೆಯವರು ಇಷ್ಟ ಪಟ್ಟ ಹುಡುಗನನ್ನು ಹುಡುಗಿಯು ಇಷ್ಟಪಡದೆ ವಿವಾಹ ಎಂಬ ಕಾರ್ಯ ನಡೆಯುತ್ತದೆ. ಅದೇ ಹಲವು ದುರಂತಗಳಿಗೆ ಕಾರಣವಾಗುತ್ತದೆ. ಈ ಕಾದಂಬರಿಯಲ್ಲಿ ಮದುವೆಯೂ ಪ್ರಮುಖ ಪಾತ್ರವನ್ನು ನಿರ್ವಹಿಸುತ್ತದೆ. ಇಲ್ಲಿ ಉಲ್ಲೇಖಿಸಲ್ಪಡುವ ಮದುವೆಯು ಮಲೆನಾಡಿನ ಶ್ರೀ ವೈಷ್ಣವ ನಾಮಧಾರಿ ಗೌಡ ಸಂಸ್ಕೃತಿಯ ಪದ್ಧತಿಯ ಪ್ರಕಾರ ನಡೆಯುವುದಾಗಿದ್ದು ಅದರಹಲವು ಆಚರಣೆ ಪದ್ಧತಿಯನ್ನು ಪರಿಚಯಿಸಲಾಗುತ್ತಿದೆ. ಅದನ್ನು ಸಾಮಾಜಿಕ ದೃಷ್ಟಿಕೋನದಿಂದ ಸಾಹಿತ್ಯದಲ್ಲಿ ಉಲ್ಲೇಖಿತವಾದ ವಿವಾಹ ಎಂಬ ಸಂಸ್ಥೆಯ ವಿವರವನ್ನು ನೀಡಲಾಗಿದೆ. ಆ ಮೂಲಕ ಒಂದು ಅಂತರ್‌ಶಿಸ್ತೀಯ ಅಧ್ಯಯನವನ್ನು ನಡೆಸಲಾಗುತ್ತಿದೆ.

ವಿವಾಹವು ಒಂದು ವಿಶ್ವವ್ಯಾಪಿಯಾದ ಸಾಮಾಜಿಕ ಸಂಸ್ಥೆಯಾಗಿದೆ. ಸಾಮಾನ್ಯವಾಗಿ ಮಾನವನ ಲೈಂಗಿಕ ಜೀವನವನ್ನು ನಿಯಂತ್ರಿಸುವ ಮತ್ತು ನಿರ್ದೇಶಿಸುವ ಸಲುವಾಗಿ ಇದು ಸ್ಥಾಪಿತವಾಗಿದೆ. ವಿವಾಹಗಳು ಸ್ವರ್ಗದಲ್ಲಿ ನಡೆಯುತ್ತದೆ ಎಂಬ ಸಾಮಾಜಿಕ ನಂಬಿಕೆಯನ್ನು ಕಾಣುತ್ತೇವೆ. ಸ್ತ್ರೀ ಪುರುಷ ಸಂಬಂಧಗಳಿಗೆ ವಿವಾಹದ ಮೂಲಕ ಸಮಾಜ ಅಂಕಿತ ಹಾಕಿ ಎಲ್ಲಾರು ಒಪ್ಪಿದ ಸಂಬಂಧಗಳು ಈ ಸಂಸ್ಥೆಯ ಚೌಕಟ್ಟಿನೊಳಗೆ ಮುಂದುವರಿದುಕೊಂಡು ಹೋಗಿ ಅವರ ಸಂತಾನಭಿವೃದ್ಧಿ ಪ್ರಕ್ರಿಯೆಗಳು ಜರುಗುತ್ತವೆ. ಇಲ್ಲಿ ವ್ಯಕ್ತಿಗಳ ಸ್ವಚ್ಛಂದ ಪ್ರವೃತ್ತಿಯನ್ನು ಬಿಗಿ ಹಿಡಿಯಲೆಂದು ಪದ್ಧತಿಗಳು ಸಂಪ್ರದಾಯಗಳು, ನೈತಿಕತೆ, ಆಚರಣೆ, ನಂಬಿಕೆ, ಆದರ್ಶಗಳೆಲ್ಲವು ಮೈತುಂಬಿ ಬರುತ್ತದೆ.

ಮನುಷ್ಯ ಕೇವಲ ತನ್ನ ಲೈಂಗಿಕ ಬಯಕೆಗಳ ಈಡೇರಿಕೆಗಾಗಿ ಮದುವೆ ಮಾಡಿಕೊಳ್ಳುವುದಿಲ್ಲ. ವಿವಾಹದ ಮೂಲಕ ಮನುಷ್ಯ ಜೀವನದ ಎಲ್ಲಾ ಪ್ರಯೋಜನಗಳಿಗೂ ಹಿನ್ನೆಲೆಯಾದ ಆರ್ಥಿಕ, ಸಾಮಾಜಿಕ, ಧಾರ್ಮಿಕ, ಸಾಂಸ್ಕೃತಿಕ ವಿಧಿ ವಿಧಾನಗಳನ್ನು ಆಚರಿಸುತ್ತಾನೆ. ವಿವಾಹವು ಧರ್ಮ, ಜಾತಿ, ಜನಾಂಗಗಳಿಗೆ ಅನುಗುಣವಾಗಿ ಅದರ ಆಚರಣಾ ವಿಧಾನಗಳು ಬೇರೆಯಾಗುತ್ತದೆ. ಇಂತಹ ಒಂದು ಪ್ರಮುಖ ಸಂಸ್ಥೆಯನ್ನು 18ನೇ ಶತಮಾನದಲ್ಲಿ ಮೊಟ್ಟ ಮೊದಲ ಬಾರಿಗೆ ಅಧ್ಯಯನ ಮಾಡಲಾಯಿತು. ಅದರ ಕಿರು ನೋಟ ಹೀಗಿದೆ.

ಎಡ್ವರ್ಡ್ ವೆಸ್ಟರ್ ಮಾರ್ಕ್ ಇವರು " ಮನುಷ್ಯರ ಮದುವೆಯ ಉಗಮ" ಎಂಬ ಪುಸ್ತಕ ಪ್ರಕಟಿಸುವುದರ ಮೂಲಕ ವಿವಾಹದ ಬಗೆಗಿನ ಅಧ್ಯಯನ ಪ್ರಾರಂಭವಾಗುತ್ತದೆ. ಅದರಲ್ಲಿ

ಜೀವ ವಿಜ್ಞಾನದ ದೃಷ್ಟಿಯಿಂದ ವಿಶ್ಲೇಷಣೆ ಮಾಡಿದ್ದಾರೆ. ಸ್ತ್ರೀ ಪುರುಷರ ಸಂಬಂಧದಲ್ಲಿ ಪೌರುಷದ ಪ್ರಾಧಾನ್ಯತೆ, ಪರಿಸರದ ಒತ್ತಡ, ಸಹಜವಾದ ಆಯ್ಕೆ, ನೀತಿಯ ಕಲ್ಪನೆ ಇವುಗಳನ್ನು ಸ್ಪಷ್ಟಪಡಿಸಿದ್ದಾನೆ. ಇನ್ನೊಂದು ಅಧ್ಯಯನ ಎ.ಕೆ.ಕ್ರಾಲಿ ಎಂಬುವವರದು. ಇವರು 'ನಿಗೂಢ ಗುಲಾಬಿ' ಎಂಬ ಪುಸ್ತಕ ಪ್ರಕಟಿಸಿದರು. ಇದರಲ್ಲಿ ಹಲವಾರು ಆದಿವಾಸಿ ಜನಾಂಗಗಳ ವಿವಾಹದ ಪದ್ಧತಿ ವಿವರಿಸಿ ವಿವಾಹ ಎನ್ನುವುದು ಒಂದು ಧಾರ್ಮಿಕ ವಿಧಿ ಮಾತ್ರ. ಅದರ ಸಾಮಾಜಿಕ ಪ್ರಯೋಜನ ಶೂನ್ಯ ಎಂಬುದು ಅವರ ವಾದ. ಅವರ ಪ್ರಕಾರ ಮಾನವನ ಸಂಸ್ಕೃತಿ ಎಷ್ಟು ಪ್ರಾಚೀನವು ವಿವಾಹವೂ ಕೂಡ ಅಷ್ಟೆ ಪ್ರಾಚೀನವಾದದ್ದು ಎಂದಿದ್ದಾರೆ.

ವಿವಾಹ ಸಂಸ್ಥೆಯ ಮೂಲ ರೂಪದ ಬಗ್ಗೆ ತಜ್ಞರುಗಳಲ್ಲಿ ಭಿನ್ನಮತವಿರಬಹುದಾಗಿದ್ದರೂ, ವಿವಾಹವು ಕೇವಲ ಲೈಂಗಿಕ ಆಸಕ್ತಿಯ ಪೂರೈಕೆಗಾಗಿ ಸ್ಥಾಪನೆಗೊಂಡ ವ್ಯವಸ್ಥೆಯಲ್ಲಿ ಲೈಂಗಿಕ ಬಯಕೆ ಪೂರೈಕೆಗೊಂಡ ಮೇಲೆಯೇ ಸ್ತ್ರೀ ಪುರುಷರ ದಾಂಪತ್ಯ ಸಂಬಂಧವು ಮುಂದುವರೆಯುತ್ತದೆ. ಆದ್ದರಿಂದಲೇ ಆಧುನಿಕತೆ ಯಾವ ಪ್ರಮಾಣದಲ್ಲಿದ್ದು ವಿವಾಹಕ್ಕೆ ಅದರದೇ ಆದ ಪ್ರಾಮುಖ್ಯತೆ ಇರುವುದನ್ನು ಕಾಣುತ್ತೇವೆ. ಪ್ರತಿಯೊಬ್ಬರು ವಿವಾಹದ ಹೊರತಾದ ಹೆಣ್ಣು ಗಂಡಿನ ಲೈಂಗಿಕ ಸಂಬಂಧಗಳಿದ್ದರು ಕೂಡ. ತಮ್ಮ ಯಾವುದೋ ಒಂದು ವಯಸ್ಸಿನಲ್ಲಿ ವಿವಾಹದ ಮೊರೆ ಹೋಗುವುದನ್ನು ಕಲಿತಿದ್ದೇವೆ.

ಕಾನೂರು ಹೆಗ್ಗಡತಿಯಲ್ಲಿಯೂ ಸಹ ಲೇಖಕರು ಪೂರ್ಣ ಕಾದಂಬರಿಯನ್ನು ಮದುವೆ ಎಂಬ ಪರಿಕಲ್ಪನೆಯನ್ನು ಆಧಾರವಾಗಿರಿಸಿಕೊಂಡು ಬರೆದಿದ್ದಾರೆ. ಕಾದಂಬರಿಯ ಪ್ರಾರಂಭದಲ್ಲಿ ಮೈಸೂರಿನಿಂದ ಹಿಂತಿರುಗಿದ ಯುವಕರ ಉದ್ದೇಶ ರಜೆ ಕಳೆಯುವುದಾದರೂ ಕಾದಂಬರಿಯ ಪ್ರಮುಖ ಪಾತ್ರವಾದ ಚಂದ್ರಯ್ಯಗೌಡರ ಉದ್ದೇಶ ವಿವಾಹ ಮಾಡುವುದಾಗಿತ್ತು. ಅವರು ಕೂಡ ತಮ್ಮ ಘನತೆಗೆ ತಕ್ಕಂತೆ ಮೂರು ವಿವಾಹವಾಗಿದ್ದನ್ನು ನೋಡಬಹುದು. ಕಾದಂಬರಿಕಾರರು ಚಿತ್ರಿಸಿದ್ದ ವೈವಾಹಿಕ ಬದುಕು ಮತ್ತು ಮದುವೆಯ ಚಿತ್ರಣದಲ್ಲಿ ಅಂದಿನ ಸಮಾಜದ ಸ್ತ್ರೀ ಪುರುಷರ ಸ್ಥಾನ ಮಾನಗಳನ್ನು ವಿವರಿಸಿದ್ದಾರೆ. ಅವರ ಎರಡೂ ಕಾದಂಬರಿಯಲ್ಲಿಯು ಮದುವೆಯೇ ಪ್ರಮುಖ ಕಥಾವಸ್ತು. ಅದು ಸೀತೆ-ರಾಮಯ್ಯ-ಹೂವಯ್ಯರದಾಗಿರಬಹುದು. ಚಿನ್ನಮ್ಮ - ಮುಕುಂದಯ್ಯ ಹಾಗೂ ಗುತ್ತಿ-ತಿಮ್ಮಿಯದಾಗಿರಬಹುದು. ಒಟ್ಟಾರೆ ತ್ರಿಕೋನ ಪ್ರೇಮ ಕಥೆಯೇ ಮುಖ್ಯವಾಗಿದೆ.

ಪ್ರಸ್ತುತ ಕಾದಂಬರಿಯಲ್ಲಿ ಬೇರೆ ಬೇರೆ ವಿವಾಹ ನಡೆದಿದ್ದರೂ ರಾಮಯ್ಯ ಮತ್ತು ಸೀತೆಯ ವಿವಾಹವನ್ನು ಹೆಚ್ಚು ವಿವರಿಸಿ, ಚಂದ್ರಯ್ಯ ಗೌಡ ಹಾಗೂ ಸುಬ್ಬಮ್ಮರ ಮೂರನೆಯ ವಿವಾಹವನ್ನು ಓದುಗರ ವಿವೇಚನೆಗೆ ಬಿಟ್ಟಿದ್ದಾರೆ. ಕುವೆಂಪುರವರ ಈ ವಿವಾಹದ ವಿಶ್ಲೇಷಣೆಯೂ ಮಲೆನಾಡಿನ ಶ್ರೀ ವೈಷ್ಣವ ನಾಮಧಾರಿ ಗೌಡ ಸಂಸ್ಕೃತಿಯ ಸಂಪ್ರದಾಯದ ಪ್ರಕಾರವಾಗಿದ್ದು, ಅದರ ವಿವರಣೆ ಇದೆ. ಇದೊಂದು ವಿಶಿಷ್ಟ ವಿವಾಹದ ಆಚರಣಾ ಪದ್ಧತಿಯಾಗಿದ್ದು ಅಲ್ಲಿ ಆಚರಿಸುವ ಪ್ರತಿಯೊಂದು ಆಚರಣೆಗಳಿಗೂ ಹಲವು ಕಥೆ, ಉಪಕಥೆಗಳಿಂದ ತಮ್ಮ ಆಚರಣೆಯನ್ನು ಸಮರ್ಥಿಸಿಕೊಳ್ಳುತ್ತಾರೆ.

# ಚಂದ್ರಯ್ಯ ಗೌಡರ ವಿವಾಹ ವೃತ್ತಾಂತ

ಚಂದ್ರಯ್ಯ ಗೌಡರು ಕಾನೂರಿನ ನಡುವಯಸ್ಸಿನ, ಸದೃಢ ಶ್ರೀಮಂತ ವ್ಯಕ್ತಿ. ಮೇಲ್ನೋಟಕ್ಕೆ ಮರುವಿವಾಹವಾಗುವಷ್ಟು ಚೈತನ್ಯವಿರುವ ವ್ಯಕ್ತಿ. ಇವರ ಮರುವಿವಾಹಕ್ಕೆ ಕಾರಣ ಮೊದಲೆರಡು ಪತ್ನಿಯರು ತೀರಿಕೊಂಡಿದ್ದರು. ಇವರು ತಮ್ಮ ಮೊದಲನೆ ಹೆಂಡತಿ ತೀರಿಹೋದ ಸಮಯದಲ್ಲಿ ಬಂದೂಕು ಹಿಡಿದುಕೊಂಡು ಆತ್ಮಹತ್ಯೆ ಮಾಡಿಕೊಳ್ಳಲು ಮುಂದಾದವರು. ಒಂದೇ ವರ್ಷದಲ್ಲಿ ಆ ಕಹಿ ಘಟನೆ ಮರೆತು ಎರಡನೆಯ ಮದುವೆಯಾಗಿ ಕೆಲವಷ್ಟು ವರ್ಷ ಸುಖವಾಗಿದ್ದು ಅವರಿಗೂ ಎರಡು ಮಕ್ಕಳನ್ನು ದಯಪಾಲಿಸಿದರು ಅವಳ ಮೂರನೆಯ ಮಗುವಿನ ಗರ್ಭಿಣಿಯಲ್ಲಿ ಇಹಲೋಕ ತ್ಯಜಿಸಿದಳು. ಆ ಕಾರಣದಿಂದ ಮೂರನೆಯ ವಿವಾಹಕ್ಕೆ ಈಗ ತಯಾರಾಗಿದ್ದಾರೆ. ಆದರೆ ಅವರ ಹಿತಚಿಂತಕರು, ಸಂಬಂಧಿಗಳು, ಬಂಧುಗಳು ಎಲ್ಲಾ ಬಂದು ಇನ್ನೊಂದು ವಿವಾಹದ ಸಾಹಸಕ್ಕೆ ಕೈಹಾಕಬೇಡಿರೆಂದು ಮನವಿ ಮಾಡಿದರು. ಚಂದ್ರಯ್ಯ ಗೌಡರು ವಿಮುಖರಾಗಿಲ್ಲ. ಹಾಗಾದರೆ ವಿವಾಹದ ಅಂತಹ ಆಕರ್ಷಣೆ ಯಾವುದು ಎಂದು ಯೋಚಿಸುವುದು ಅನಿವಾರ್ಯ.

ವಿವಾಹವನ್ನು ಪ್ರಚೋದಿಸುವ ಸಮಾಜಗಳು ವಿವಾಹದ ಅವಶ್ಯಕತೆಯನ್ನು ರಸವತ್ತಾಗಿಯೇ ವಿವರಿಸುತ್ತವೆ. ಆದರೆ ಚಂದ್ರಯ್ಯಗೌಡರಂತವರು ವಿವಾಹವಾಗಲು ಹೊರಟರೆ ಅದೇ ಸಮಾಜ ಅವರನ್ನು ವಿವಾಹವಾಗದಂತೆ ತಡೆಯಲು ಇನ್ನಿಲ್ಲದ ಪ್ರಯತ್ನ ಮಾಡುತ್ತವೆ. ಆದರೆ ಇಲ್ಲಿ ಗಮನಿಸಬೇಕಾದ ಅಂಶ ಎಂದರೆ ಈಗಾಗಲೇ ಎರಡು ವಿವಾಹವಾದವರು ಮರು ಮದುವೆಗೆ ಒಲವು ತೋರಲು ಕಾರಣ ಹಾಗೂ ಅವರ ಬಂಧುಗಳು ಹಿತೈಷಿಗಳು ವಿವಾಹವಾಗದಂತೆ ತಿಳಿ ಹೇಳಲು ಪ್ರಯತ್ನಿಸಿದ್ದಕ್ಕೆ ಕಾರಣ ಈ ಎರಡೂ ಪ್ರಶ್ನೆಗಳಿಗೆ ಉತ್ತರವನ್ನು ಕಂಡುಕೊಳ್ಳುವುದು ಅವಶ್ಯ ಎನಿಸುತ್ತದೆ.

ಮೊದಲನೆಯ ಪ್ರಶ್ನೆಯನ್ನು ಎತ್ತಿಕೊಂಡಾಗ ನಮ್ಮ ಮುಂದೆ ಹಲವು ಅಂಶಗಳು ಎದ್ದು ಕಾಣುತ್ತವೆ. ಅವುಗಳೆಂದರೆ ಸಂತಾನೋತ್ಪತ್ತಿ, ಗಂಡು ಮಕ್ಕಳು ಬೇಕೆಂಬ ಹಂಬಲ, ಜೊತೆಗಾರ್ತಿಬೇಕೆಂಬ ಬಯಕೆ ಮತ್ತು ಲೈಂಗಿಕ ಚಪಲ ಇವೆಲ್ಲವು ಕಾರಣವಾಗಬಹುದು. ಆದರೆ ಮೊದಲ ಮೂರು ಅಂಶಗಳು ಅವರಿಗೆ ಲಭ್ಯವಿದ್ದುದ್ದರಿಂದ ಕೊನೆಯದೆ ಅವರ ಮರುವಿವಾಹಕ್ಕೆ ಕಾರಣವಾಗಿರಬಹುದು. ಇದನ್ನು ತಪ್ಪು ಎಂದು ಹೇಳಲು ಬರುವುದಿಲ್ಲ. ಕಾರಣ ರಾಬರ್ಟ್ ಮಾಲ್ಥಸ್ ಹೇಳುವ ಹಾಗೆ "ಮನುಷ್ಯ ಬದುಕಲು ಆಹಾರದ ಅವಶ್ಯಕತೆ ಎಷ್ಟು ಮುಖ್ಯವೋ, ಹಾಗೆಯೇ ಮನುಷ್ಯ ಮನುಷ್ಯನಾಗಿರಬೇಕಾದರೆ ಅವನ ಲೈಂಗಿಕ ಬಯಕೆಯೂ ಈಡೇರಬೇಕು" ಎಂದಿದ್ದಾನೆ" ಹಾಗಾಗಿ ಚಂದ್ರಯ್ಯಗೌಡರು ವಿವಾಹಕ್ಕೆ ಮುಂದಾಗಿದ್ದು ತಪ್ಪಲ್ಲ.

ಆದರೆ ವಿವಾಹಗಳಲ್ಲಿ ಗಂಡು ಹೆಣ್ಣಿನ ನಡುವಿನ ವಯಸ್ಸಿನ ಅಂತರ ಕಡಿಮೆ ಇರಬೇಕು. ಅಂತರಗಳು ಹೆಚ್ಚಾದಂತೆ ಸಮಸ್ಯೆಗಳು ಹಾಗೂ ಶೀತಲ ಸಮರಗಳು ಪ್ರಾರಂಭವಾಗುತ್ತವೆ.

ಆಗ ಬೇರೆಲ್ಲ ಸಮಸ್ಯೆಗಳು ಹುಟ್ಟಿಕೊಳ್ಳುತ್ತವೆ. ಆದ್ದರಿಂದ ಸಮಾಜದ ಹಿತಕ್ಕಾಗಿ ವ್ಯಕ್ತಿಯ ಸುಖವನ್ನು ತಡೆಹಿಡಿಯಬೇಕು. ಇಂತಹ ಸಾಮಾಜಿಕ ಪ್ರವೃತ್ತಿಯನ್ನು ಮಾನವ ಬಾಲ್ಯದಿಂದಲೇ ಒಳಮಾಡಿಕೊಂಡೆ ಬೆಳೆಯುತ್ತಾನೆ. ಮನುಷ್ಯರ ಸಾಮಾಜಿಕ ವ್ಯವಸ್ಥೆಯಲ್ಲಿ ವ್ಯಕ್ತಿಯ ಆಚಾರ, ವಿಚಾರ, ವ್ಯವಹಾರಗಳ ಬಗ್ಗೆ ಇರುವ ನಿರ್ಬಂಧ ನಿಷೇಧ ನಿರೋಧಗಳಿಗೆ ಇದೆ ಕಾರಣ. ಲೈಂಗಿಕ ಪ್ರವೃತ್ತಿಯಲ್ಲಿ ಮಾನವ ನೆಲೆ ಉಳಿದ ಪ್ರಾಣಿಗಳ ನೆಲೆಗಿಂತ ಭಿನ್ನವಾಗಿರುವುದು. ಮನುಷ್ಯ ಸಂಸ್ಕೃತಿಯ ಜಾಡಿನಲ್ಲಿ ಸಿಕ್ಕೊಡನೆ ಅವನ ಲೈಂಗಿಕ ಪ್ರವೃತ್ತಿ ಸ್ವಚ್ಛಂದವಾಗಿರುವುದು ತಪ್ಪಾಗುತ್ತದೆ. ಅದಕ್ಕಾಗಿ ಚಂದ್ರಯ್ಯಗೌಡರು ಗಂಗೆ ಎಂಬ ಕೆಲಸದಾಳನೊಂದಿಗೆ ದೈಹಿಕ ಸಂಪರ್ಕ ಸಾಧಿಸಿದ್ದು ಕೂಡ ಅವರ ದೌರ್ಬಲ್ಯ ಇರಬಹುದು. ಅವರು ಸಮಾಜಕ್ಕೆ ಹೆದರುತ್ತಾರೆ ಎಂಬುದಕ್ಕೆ ಇದೇ ಸಾಕ್ಷಿ. ಸುಬ್ಬಮ್ಮಳ ವಿವಾಹ ನಂತರ ಚಂದ್ರಯ್ಯಗೌಡರು ಗಂಗೆಯ ಬಳಿ ಹೋಗುವುದನ್ನು ಕಡಿಮೆ ಮಾಡುತ್ತಾರೆ. ಅಂದರೆ ನೈತಿಕತೆ ಅವರಲ್ಲಿ ಇನ್ನು ಇದೆ ಎಂಬುದು ತಿಳಿದುಕೊಳ್ಳಬಹುದು. ಅದರೊಂದಿಗೆ ತಾನು ಮರುವಿವಾಹವಾಗುವುದರಿಂದ ಮರ್ಯಾದೆ ಉಳಿಯುತ್ತದೆ. ಅಂತಸ್ತನ್ನು ಉಳಿಸಿಕೊಂಡು ಹೋಗಬಹುದು ಮುಂತಾದ ನಾನಾ ರೀತಿ ಯೋಚನೆಗಳ ಮೂಲಕ ಅಂತಿಮವಾಗಿ ಈ ನಿರ್ಧಾರಕ್ಕೆ ಬರುತ್ತಾರೆ.

ಚಂದ್ರಯ್ಯಗೌಡರ ವಿವಾಹದ ನಿರ್ಧಾರದ ಹಿಂದೆ ಸಮಾಜದ ಮತ್ತು ಅವರ ಕುಟುಂಬದ ನಿಲುವಿನಲ್ಲಿ ಭಿನ್ನತೆ ಇದೆ. ಸ್ವತಃ ಅವರಿಗೂ ಸಹ ಮನಸ್ಸಿನಾಳದಲ್ಲ ತಾನೂ ತಪ್ಪುಮಾಡುತ್ತಿದ್ದೇನೆ ಎಂಬ ಅನಿಸಿಕೆ ಇದ್ದೆ ಇತ್ತು. ಅದನ್ನು ಪುಷ್ಟಿಕರಿಸುವ ಅಂಶ ಎಂದರೆ ತನ್ನ ಮೊದಲನೆ ಮಗನಿಂದ ವಿಚಾರವನ್ನೆ ಮರೆಮಾಚಿರುವುದು. ಮೇಲ್ನೋಟಕ್ಕೆ ಇದು ಅವರ ದರ್ಪದ ಕುರುಹು ಆಗಿ ಕಂಡುಬಂದರೂ ಅವರ ಮನಸ್ಸಿನಲ್ಲಿ ಅಂಜಿಕೆ ಇದೆ ಎಂಬುದನ್ನು ತಿಳಿಯಬಹುದು.

ಒಟ್ಟಾರೆ ಚಂದ್ರಯ್ಯಗೌಡರ ದೃಷ್ಟಿಯಲ್ಲಿ ವಿವಾಹದ ಅವಶ್ಯಕತೆ ಎಂದರೆ ಲೈಂಗಿಕ ಬಯಕೆಯ ಪೂರೈಕೆಗೆ ಹೆಣ್ಣು ಬೇಕು. ಜೊತೆಗೆ ತಮ್ಮ ಇಳಿವಯಸ್ಸಿನಲ್ಲಿ ಸೇವೆಗೆ, ಶುಶ್ರೂಷೆಗೆ ಜನ ಬೇಕು. ಅದಕ್ಕಾಗಿ ವಿವಾಹ ಅನಿವಾರ್ಯ ಎಂಬ ನಿರ್ಧಾರಕ್ಕೆ ಬರುತ್ತಾರೆ. ಆ ಮೂಲಕ ಮೂರನೆಯ ವಿವಾಹವನ್ನು ಮಾಡಿಕೊಂಡು ಹತ್ತು ಹಲವು ಸಮಸ್ಯೆಯನ್ನು ಎದುರಿಸುತ್ತಾರೆ.

## ಸಮಾಜದ ದೃಷ್ಟಿಯಲ್ಲಿ ಚಂದ್ರಯ್ಯಗೌಡರ ಮರುಮದುವೆ

ಮದುವೆ ಹೆಣ್ಣು ಗಂಡಿಗೆ ಸಂಬಂಧಿಸಿದ ವಿಷಯ. ಆದರೆ ಅದಕ್ಕೆ ಒಂದು ನಿಗದಿತ ವಯಸ್ಸು, ಜಾತಿ, ಧರ್ಮ, ಹೊಂದಾಣಿಕೆಯಂತಹ ವಿಷಯಗಳು ಅದರ ಮೇಲೆ ಪ್ರಭಾವ ಬೀರುತ್ತವೆ. ಆದ್ದರಿಂದ ಗಂಡು ಮತ್ತು ಹೆಣ್ಣು ಇದನ್ನು ನಿರ್ಧರಿಸದೆ ಸುತ್ತಲಿನ ಹಿತೈಷಿಗಳು, ಬಂದುಗಳು ಎಲ್ಲರೂ ಇದರಲ್ಲಿ ಪ್ರತ್ಯಕ್ಷವಾಗಿ ಅಥವಾ ಪರೋಕ್ಷವಾಗಿ ಭಾಗವಹಿಸುತ್ತಾರೆ. ಇವರೆಲ್ಲರ ಸಲಹೆ ಸೂಚನೆಗಳು ಮುಖ್ಯವಾಗುತ್ತದೆ. ಆದರೆ ಚಂದ್ರಯ್ಯಗೌಡರ ಮರುವಿವಾಹಕ್ಕೆ ಇವರೆಲ್ಲರ ವಿರೋಧವೂ ಇತ್ತು. ಮುಂದಾಲೋಚನೆ ಇಲ್ಲದ ಹುಂಬ ಮನಸ್ಸಿನ ಚಂದ್ರಯ್ಯಗೌಡರಿಗೆ ಇದಾವುದೂ ಸೇರುತ್ತಿರಲಿಲ್ಲ. ಅವರಿಗೆ ಬಾಯಿರುಚಿಗೆ ಹುಳಿ ಹೆಂಡ ಹಾಗೂ ದೈಹಿಕ ಕಾಮನೆ ತೀರಿಸಿಕೊಳ್ಳಲು ಹೆಣ್ಣು ಇವೆರಡಿದ್ದರೆ ಪ್ರಪಂಚವೆ ಅವರ ಕೈಯಲಿದ್ದ

ಅನುಭವದ ಹಾಗೆ. ಆದ್ದರಿಂದ ಮರು ವಿವಾಹಕ್ಕೆ ಒಲಿದು ನವ ವಧುವಿನ ಪ್ರೀತಿಯ ಮಹಾಪೂರದಲ್ಲಿ ಮುಳುಗಿ ಅವಳ ಸೂತ್ರದ ಕೈಬೊಂಬೆಯಾದರು ಚಿಕ್ಕ ವಯಸ್ಸಿನಲ್ಲಿ ಅದೇ ಸುಬ್ಬಮ್ಮ ಅವರಿಗೆ ಕುರೂಪಿಯಾಗಿ, ಒರಟು ಸ್ವಭಾವದವಳಾಗಿ ಕಂಡಿದ್ದಳು. ಆದರೆ ಆಕೆ ಈಗ ಸುರಸುಂದರಿಯ ಹಾಗೆ ಕಾಣುತ್ತಾಳೆ.

ಈ ಕಾರಣದಿಂದಾಗಿಯೇ ಸಮಾಜ ವಿವಾಹವಾಗುವವರ ನಡುವೆ ವಯಸ್ಸಿನ ಅಂತರ ಕಡಿಮೆ ಇರಬೇಕು. ಇಲ್ಲದಿದ್ದರೆ ಬಹಳ ಬೇಗ ಗಂಡ ಹೆಂಡಿರ ನಡುವೆ ವೈಮನಸ್ಸು ಏರ್ಪಡುತ್ತದೆ. ಉತ್ತಮ ಸಹಬಾಳ್ವೆ ಸಾಧ್ಯವಾಗುವುದಿಲ್ಲ. ಸದಾ ಅನುಮಾನಗಳ ನೋಟದ ನಡುವೆಯೇ ಜೀವನ ಮಾಡಬೇಕಾಗುತ್ತದೆ ಎಂದು ಸಮಾಜ (ಅಂದರೆ ಇಲ್ಲಿ ಸದಸ್ಯರು) ಈ ವಿವಾಹಕ್ಕೆ ಮನ್ನಣೆ ನೀಡುವುದಿಲ್ಲ. ಹಾಗೆಂದು ಮರು ಮದುವೆ ಮಲೆನಾಡಿನ ಭಾಗದಲ್ಲಿ ಹೊಸ ವಿಷಯವಲ್ಲ. ಇಲ್ಲಿ ಬಾಲ್ಯ ವಿವಾಹ ಪದ್ಧತಿ ಆಚರಣೆಯಲ್ಲಿದ್ದುದ್ದರಿಂದ ಮತ್ತು ಅನಾರೋಗ್ಯದ ಸಮಸ್ಯೆ ಸದಾ ಮಲೆನಾಡಿಗರನ್ನು ಕಾಡುತ್ತಿದ್ದರಿಂದ ಮಹಿಳಾ ಮರಣದ ಪ್ರಮಾಣ ಅಧಿಕವಾಗಿತ್ತು. ಆದ್ದರಿಂದ ಮರುವಿವಾಹ ಪದ್ಧತಿ ಜಾರಿಯಲ್ಲಿತ್ತು. ಇದರೊಂದಿಗೆ ಇಲ್ಲಿನ ಜನರ ಮೂಢನಂಬಿಕೆಯು ಕೂಡ ಸಾವಿನ ಸಂಖ್ಯೆ ಹೆಚ್ಚಲು ಕಾರಣವಾಗಿತ್ತು. ಇವರು ಯಾವುದೇ ಅನಾರೋಗ್ಯ ಕಾಡಿದಾಗ ವೈದ್ಯರಲ್ಲಿಗೆ ಹೋಗುವುದರ ಬದಲು ಜೋಯಿಸರ ಹತ್ತಿರ ಹೋಗುತ್ತಿದ್ದರು ಪರಿಣಾಮ ಸಾವು ಖಚಿತ. ಇದರಲ್ಲಿ ಮಹಿಳೆಯರ ಅಥವಾ ಹೆಣ್ಣು ಮಕ್ಕಳ ಮರಣವೇ ಹೆಚ್ಚು.

ಈ ಮೇಲಿನ ಕಾರಣದಿಂದ ಚಂದ್ರಯ್ಯಗೌಡರ ಎರಡು ಹೆಂಡತಿಯರು ತೀರಿಕೊಂಡಿದ್ದರು. ಅದಕ್ಕಾಗಿ ಮೂರನೆಯ ಮದುವೆಗೆ ತಯಾರಿ ನಡೆಸುತ್ತಾರೆ. ಆದರೆ ಈ ಹಿಂದೆ ಹೇಳಿದ ಕಾರಣದಿಂದಾಗಿ ಸಮಾಜ ವಿವಾಹಕ್ಕೆ ಒಪ್ಪದಿದ್ದರೂ ಚಂದ್ರಯ್ಯಗೌಡರು ವಿವಾಹವಾಗುತ್ತಾರೆ. ಅಲ್ಲಿಂದಲೇ ಹಲವು ಸಮಸ್ಯೆಗಳು ಅವರ ಕುಟುಂಬದಲ್ಲಿ ಹುಟ್ಟಿಕೊಂಡು ಕೊನೆಗೆ ಇಬ್ಬರು ದಾರುಣವಾದ ಅಂತ್ಯ ಕಾಣುತ್ತಾರೆ.

ವಯಸ್ಸಿನಲ್ಲಿ ತುಂಬಾ ಅಂತರ ಇದ್ದ ಹೆಣ್ಣುಗಂಡುಗಳ ವಿವಾಹವಾದರೆ ಸಮಾಜದಲ್ಲಿ ವಿಘಟನೆ ಸಹಜವಾಗಿ ಉಂಟಾಗುತ್ತದೆ. ಇದನ್ನು ಗಮನದಲ್ಲಿಟ್ಟುಕೊಂಡು ಸಮಾಜ ಮದುವೆಯನ್ನು ಗಮನಿಸುತ್ತದೆ. ಚಂದ್ರಯ್ಯಗೌಡರ ವಿವಾಹದಿಂದ ಇಂತಹದೆ ಸಮಸ್ಯೆ ಎದುರಾಗುತ್ತದೆ. ಮೊದಲಿನ ಎರಡು ಹೆಂಡತಿಯರ ಮೇಲೆ ಇದ್ದ ಹಿಡಿತ ಸುಬ್ಬಮ್ಮನ ವಿಚಾರದಲ್ಲಿ ಕಾಣಲಾಗುವುದಿಲ್ಲ ಎನಿಸುತ್ತದೆ. ಇದಕ್ಕೆ ಕಾರಣ ಅವರಿಬ್ಬರ ನಡುವಿನ ವಯಸ್ಸಿನ ಅಂತರ. ಇದರಿಂದ ವೃದ್ಧರಾದ ಚಂದ್ರಯ್ಯಗೌಡ ತನ್ನ ಹೆಂಡತಿಯ ಶೀಲವನ್ನು ಶಂಕಿಸಲು ಪ್ರಾರಂಭಿಸುತ್ತಾನೆ. ತನಗೆ ವಯಸ್ಸಾಗಿದೆ ಎಂಬುದನ್ನು ಮರೆಮಾಚಲು ಹೆಂಡತಿಯ ಚಾಡಿಯ ಮಾತುಗಳನ್ನು ಕೇಳಿ ಮನೆಯ ಇತರ ಸದಸ್ಯರ ಮೇಲೆ ಹರಿ ಹಾಯುವುದು. ಅವರಿಗೆ ದೈಹಿಕ ಮಾನಸಿಕ ಹಿಂಸೆ ನೀಡುವುದು. ಹೆಂಡತಿಯನ್ನು ಅನಾಗರೀಕವಾಗಿ ವರ್ತಿಸಲು ಬಿಡುವುದು. ಅವಳಿಗೆ ಇಷ್ಟವಾದ ವಸ್ತ್ರಗಳನ್ನು ಬಂಗಾರ, ಒಡವೆಗಳನ್ನು ತಂದು ಕೊಟ್ಟು ಅವಳನ್ನು ವಶಪಡಿಸಿಕೊಳ್ಳಲು ನಾನಾ ಮಾರ್ಗ ಅನುಸರಿಸುತ್ತಾನೆ.

ಇಷ್ಟಾದರು ಅವಳ ಮೇಲಿನ ವ್ಯಾಮೋಹ ಹೆಚ್ಚಾದಂತೆ ಅನುಮಾನ ಶಂಕೆಗಳು ಹೆಚ್ಚುತ್ತ

ಇಷ್ಟಾದರು ಅವಳ ಮೇಲಿನ ವ್ಯಾಮೋಹ ಹೆಚ್ಚಾದಂತೆ ಅನುಮಾನ ಶಂಕೆಗಳು ಹೆಚ್ಚುತ್ತ ಹೋಗುತ್ತದೆ. ಇದರಿಂದಾಗಿ ಕಾದಂಬರಿಯ ಇತರೆ ಪಾತ್ರಗಳಾದ ಹೂವಯ್ಯ, ರಂಗಪ್ಪ ಸೆಟ್ಟಿಯವರ ಮೇಲು ಅನುಮಾನ ಪಡುತ್ತಾರೆ. ಈ ಕಾರಣಕ್ಕಾಗಿ ಅವರಿಬ್ಬರನ್ನು ಹೀನಾಯವಾಗಿ ನಡೆಸಿಕೊಳ್ಳುತ್ತಾನೆ. ಈ ಅಂಶಗಳನ್ನು ಮನೋ ವೈಜ್ಞಾನಿಕವಾಗಿ ವಿಶ್ಲೇಷಿಸಿ ಅಧ್ಯಯನ ನಡೆಸಿದಾಗ, ಮನುಷ್ಯರ ಮನಸ್ಸು ಹೆಣ್ಣಿಗಾಗಿ ಹೇಗೆಲ್ಲ ವರ್ತಿಸುತ್ತದೆ ಎಂಬುದು ತಿಳಿಯುತ್ತದೆ. ಅದಕ್ಕಾಗಿಯೇ ಸಮಾಜ ವಯಸ್ಸಿನ ಅಂತರ ಹೆಣ್ಣುಗಂಡುಗಳ ನಡುವೆ ಅಧಿಕವಿದ್ದಾಗ ವಿವಾಹವಾಗದಂತೆ ಸಲಹೆ ನೀಡುತ್ತದೆ.

## ಮಲೆನಾಡು ಶ್ರೀ ವೈಷ್ಣವ ನಾಮಧಾರಿ ಗೌಡ ಸಂಸ್ಕೃತಿಯಲ್ಲಿ ಮದುವೆ ಆಚರಣೆಗಳ ಪ್ರಕ್ರಿಯೆ

ಮಲೆನಾಡಿನ ಭಾಗದಲ್ಲಿ ಹಿಂದೆ ಮದುವೆ ಎಂದರೆ ಸುಮಾರು ಹದಿನೈದು ದಿನಗಳ ಸಂಭ್ರಮ. ಕುವೆಂಪುರವರ ಈ ಕಾದಂಬರಿಯ ಕಾಲದಲ್ಲು ಸರಿ ಸುಮಾರು ಇಷ್ಟೆ ದಿನಗಳ ಆಚರಣೆ ಇತ್ತು. ಆದರೆ ಇಂದು ಅದು ತನ್ನೆಲ್ಲ ವಿಧಿವಿಧಾನಗಳಿಂದ, ಸಂಪ್ರದಾಯಗಳಿಂದ ದೂರವಾಗಿದ್ದು ಕೇವಲ ಒಂದೇ ದಿನದ ಅಬ್ಬರದ, ಆಡಂಬರದ ಕಾರ್ಯಕ್ರಮವಾಗಿ ಮುಗಿದು ಬಿಡುತ್ತದೆ. ಈ ಕಾದಂಬರಿಯಲ್ಲಿ ಸೀತೆ – ರಾಮಯ್ಯ ಹಾಗೂ ಪುಟ್ಟಮ್ಮ – ಚಿನ್ನಯ್ಯರ ವಿವಾಹ ಪ್ರಸಂಗ ಬರುತ್ತದೆ. ಇವರದು ಮಲೆನಾಡಿನ ಶ್ರೀ ವೈಷ್ಣವ ನಾಮಧಾರಿ ಗೌಡ ಸಂಸ್ಕೃತಿಯ ಕುಟುಂಬ. ಇವರ ವಿವಾಹದ ಆಚರಣೆ ಸಂಪ್ರದಾಯ, ವಿಧಿ ವಿಧಾನಗಳೇ ಭಿನ್ನವಾದದ್ದು. ಅವರ ಮದುವೆಯ ಸಿದ್ಧತೆ, ವಿಧಿಗಳನ್ನು ಈ ಕೆಳಕಂಡಂತೆ ವಿವರಿಸಬಹುದು.

ಪ್ರತಿಯೊಂದು ಜನಾಂಗದಲ್ಲೂ ಮದುವೆಗೆ ತನ್ನದೇ ಆದ ಮಹತ್ವವಿದೆ. ಇದಕ್ಕೆ ಗೌಡರು ಹೊರತಾಗಿಲ್ಲ. ಇಲ್ಲಿ ಹೆಣ್ಣು ಗಂಡುಗಳು ಪ್ರಾಪ್ತ ವಯಸ್ಸಿಗೆ ಬಂದ ಕೂಡಲೆ ಕುಟುಂಬದ ಹಿರಿಯರು ಮದುವೆ ಮಾಡಬೇಕೆಂಬ ಆಲೋಚನೆ ಪ್ರಾರಂಭಿಸುತ್ತಾರೆ. ಇಲ್ಲಿಂದಲೆ ಮದುವೆಯ ಪ್ರಕ್ರಿಯೆಗಳು ಪ್ರಾರಂಭವಾಗುತ್ತವೆ. ಎಂತವರ ಮನೆತನಕ್ಕೆ ಹೆಣ್ಣು ಕೊಡಬೇಕು, ಎಂತಹ ಮನೆಯಿಂದ ಹೆಣ್ಣು ತರಬೇಕು, ಹೆಣ್ಣು ಗಂಡುಗಳು ಇರುವ ಮನೆಗಳ ಹುಡುಕಾಟದಿಂದ ವಿವಾಹದ ಕಾರ್ಯಾಚರಣೆ ಆರಂಭ. ಈ ಸಮಾಜದವರು ಸಂಬಂಧ ಮಾಡಬೇಕಾದರೆ ತಮ್ಮ ಸುತ್ತ ಒಂದು ಪರಿಧಿಯನ್ನು ಹಾಕಿಕೊಂಡಿರುತ್ತಾರೆ. ಹೆಣ್ಣನ್ನು ತರಬೇಕಾದರೆ ಅವರ ಮನೆ ಎಂಟು ಹತ್ತು ಮೈಲಿಯ ಒಳಗೆ ಇರಬೇಕು. ಅಂದರೆ ಬೆಳಗ್ಗೆ ಮನೆಯಿಂದ ಹೊರಟರೆ ನೆಂಟರ ಮನೆಗೆ ಮದ್ಯಾಹ್ನ ತಲುಪಬೇಕು. ಅಲ್ಲಿ ಊಟ ಮುಗಿಸಿ ಸಂಜೆ ಮರಳಿ ಬರುವ ಹಾಗಿರಬೇಕು. ಇದರೊಂದಿಗೆ ಎರಡೂ ಮನೆಯವರು ಜಮೀನು ಹೊಂದಿರಬೇಕು. ಹೆಸರುವಾಸಿ ಮನೆತನವಾಗಿರಬೇಕು. ಹುಡುಗಿ ವ್ಯವಸಾಯದ ಕೆಲಸ ತಿಳಿದಿರಬೇಕು. ಹೀಗೆ ಬೇಡಿಕೆಗಳ ಪಟ್ಟಿ ಮುಂದು ವರೆಯುತ್ತದೆ.

ಇಲ್ಲಿ ಬಾಹ್ಯ ಸೌಂದರ್ಯಕ್ಕೆ ಪ್ರಾಶಸ್ತ್ಯವಿಲ್ಲ. ಕೆಲಸ, ಗುಣನಡತೆಗೆ ಪ್ರಾಶಸ್ತ್ಯ. ಹಾಗೆಯೇ ಮದುವೆಯಾಗುವ ಹೆಣ್ಣು ಗಂಡುಗಳ ಅಭಿಪ್ರಾಯ ಕೇಳುವುದೇ ಇಲ್ಲ. ಅದನ್ನ ನಿರ್ಧರಿಸುವುದು

ಮನೆಯ ಹಿರಿಯರು. ಹುಡುಗ ಹುಡುಗಿಯ ಆಯ್ಕೆ ಆದ ನಂತರ ಈ ಭಾಗದಲ್ಲಿ ಹೆಚ್ಚು ಆಚರಣೆಯಲ್ಲಿರುವ ಪದ್ಧತಿ ಎಂದರೆ ಬಳ ನೋಡುವುದು. ಈ ಬಳ ಇಬ್ಬರದೂ ಒಂದೇ ಆದರೆ ಮದುವೆ ನಡೆಯುವ ಹಾಗಿಲ್ಲ. ಇದನ್ನು ಇಂದು ವಂಶವಾಹಿ (DNA) ಪರೀಕ್ಷೆ ಎನ್ನುತ್ತಾರೆ. ಇದು ಒಂದೇ ಆದರೆ ಹುಡುಗ – ಹುಡುಗಿಯದು ಅಣ್ಣ ತಂಗಿ ಸಂಬಂಧವಾಗುತ್ತದೆಂದು ನಿರಾಕರಿಸುತ್ತಾರೆ. ಇದಾದ ಮೇಲೆ ಹೆಣ್ಣು ಗಂಡಿನ ತಾರಾನುಕೂಲ, ಜಾತಕ ನೋಡುವ ಕ್ರಿಯೆ ಪ್ರಾರಂಭ. ಇದರ ನಂತರದ ಹಂತ ಪ್ರಸಾದ ನೋಡುವುದು. ಇದು ದೇವಸ್ಥಾನದಲ್ಲಿ ನಡೆಯುವ ಕ್ರಿಯೆ. ಈ ದಿನ ಹೆಣ್ಣು ಗಂಡಿನ ಎರಡು ಕಡೆಯವರು ಅಲ್ಲಿರುತ್ತಾರೆ. ಪುರೋಹಿತರು ಆ ದಿನ ದೇವರ ವಿಗ್ರಹಕ್ಕೆ ಎಲ್ಲಾ ಭಾಗಗಳಿಂದಲೂ ಸ್ವಲ್ಪ ಹೆಚ್ಚಾಗಿಯೇ ವಿಶೇಷವಾಗಿ ಹೂವನ್ನು ತುಂಬಿಸಿರುತ್ತಾರೆ. ಗಂಡು ಹೆಣ್ಣಿನ ಕಡೆಯವರು ದೇವರಲ್ಲಿ ಕೋರಿಕೆಯನ್ನು ಇಡುತ್ತಾರೆ. ಅದೆಂದರೆ ನಾವುಗಳು ಮಾಡುವ ಸಂಬಂಧ ಮುಂದೆ ನಮ್ಮಗಳ ಕುಟುಂಬಕ್ಕೆ ಶ್ರೇಯಸ್ಸಾಗುವುದಾದರೆ ದೇವರ ಬಲಭಾಗಕ್ಕೆ ಪ್ರಸಾದವಾಗಲಿ ಅಂದರೆ ಹೂ ಬೀಳಲಿ ಇಲ್ಲವಾದರೆ ಎಡಕ್ಕೆ ಪ್ರಸಾದವಾಗಲಿ ಎಂದು ಪ್ರಾರ್ಥಿಸಿ ಮಂಗಳಾರತಿ ಮಾಡಿಸುತ್ತಾರೆ. ಈ ಕೋರಿಕೆಯ ಮೇಲೆ ಮದುವೆಯ ಆಗು ಹೋಗು ನಿಂತಿರುತ್ತದೆ.

ಇದರ ನಂತರದ ಹಂತ ಎಂದರೆ ಹಾದಿ ನಿಮಿತ್ಯ (ದಾರಿಯಲ್ಲಿ ಎದುರಾಗುವ ಶಕುನ) ಕೂಡಿ ಬರಬೇಕು. ಅಂದರೆ ಮದುವೆ ಆಗುವ ಹುಡುಗನ ಮನೆಯವರು ಒಳ್ಳೆಯ ದಿನ ಮುಹೂರ್ತ ನೋಡಿ ಐದು ಅಥವಾ ಒಂಬತ್ತು ಜನ ಗಂಡಸರು ಸೇರಿ ಹುಡುಗನ ಮನೆಯಿಂದ ಒಪ್ಪಂದವಾದ ಹುಡುಗಿಯ ಮನೆಗೆ ಹೋಗುತ್ತಾರೆ. ಈ ರೀತಿ ಹೋಗುವ ದಾರಿಯಲ್ಲಿ ಗರುಡ ಪಕ್ಷಿ ಯಾವ ದಿಕ್ಕಿಗೆ ಹೋಗುತ್ತದೆ, ಕಾಗೆ ಯಾವ ದಿಕ್ಕಿನಿಂದ ಯಾವ ದಿಕ್ಕಿಗೆ ಹೋಗುತ್ತದೆ. ದಾರಿಯಲ್ಲಿ ಯಾರು, ಯಾರು ಅಡ್ಡ ಬರುತ್ತಾರೆ. ಯಾವ ಜಾತಿಯವರು ಕಾಣಿಸಿಕೊಂಡರು ಎಂದೆಲ್ಲ ನೋಡುತ್ತಾ ಸಾಗುತ್ತಾರೆ. ಒಟ್ಟಿನಲ್ಲಿ ದಾರಿಯಲ್ಲಿ ಏನೇನು ಅಡ್ಡ ಬರುತ್ತದೆ ಅದನ್ನೆಲ್ಲ ನೋಡಿ ಪರಿಶೀಲಿಸಿ ಶಕುನ ಒಳ್ಳೆಯದಾದರೆ ನೆಂಟಸ್ತಿಕೆ ಮುಂದುವರೆಯುತ್ತದೆ. ಇಲ್ಲದಿದ್ದರೆ ಮದುವೆ ನಡೆಯುವುದಿಲ್ಲ. ಇದೆಲ್ಲಾ ಸರಿ ಹೋದ ನಂತರ ಹೆಣ್ಣು ಗಂಡಿನ ಮನೆಯವರ ನಡುವೆ ವಿವಾಹ ಒಪ್ಪಂದ ಅಥವಾ ನಿಶ್ಚಿತಾರ್ಥ ನಡೆಯುತ್ತದೆ.

ಈ ವಿವಾಹದ ಸನ್ನಿವೇಶದಲ್ಲಿ ಹೆಚ್ಚು ಪ್ರಾಶಸ್ತ್ಯ ನೀಡಬೇಕಾಗುತ್ತಿದ್ದುದು ಸೋದರ ಮಾವಂದಿರಿಗೆ. ಅವರನ್ನು ಮುಂದಿಟ್ಟುಕೊಂಡೆ ಪ್ರತಿಯೊಂದು ಕೆಲಸ ಕಾರ್ಯಗಳು ಮಾಡಬೇಕಿತ್ತು. ಇದೆಲ್ಲದರ ನಂತರ ಮದುವೆಯ ಪೂರ್ವ ಸಿದ್ದತಾ ಕಾರ್ಯ ನಡೆಯುತ್ತದೆ. ಮದುವೆಯ ಹಿಂದಿನ ದಿನ ಹೆಣ್ಣಿಗೆ ಹೂ ಮುಡಿಸುವ ಶಾಸ್ತ್ರ ಇರುತ್ತದೆ. ಇದಕ್ಕೆ ಸಾಲಾವಳಿ ಶಾಸ್ತ್ರ ಎಂದು ಹೆಸರು. ಐದು ಜನ ಮುತ್ತೈದೆಯರು ನಾಲ್ಕಾರು ಜನ ಗೃಹಸ್ತರು ಮಧುವೆಯಾಗುವ ಹೆಣ್ಣಿನ ಮನೆಗೆ ಹೋಗುತ್ತಾರೆ. ಅಲ್ಲಿ ಹೆಣ್ಣಿಗೆ ಮಡಿಲು ತುಂಬುವ ಶಾಸ್ತ್ರ ಮಾಡುತ್ತಾರೆ. ಆ ನಂತರ ಹಸೆಗೆ ಕೂರಿಸುವ ಶಾಸ್ತ್ರ ಮಾಡುತ್ತಾರೆ. ಆ ನಂತರ ಗೋಪೂಜೆ, ಆ ನಂತರ ಉಗುರು ಮಡಿಚುವ ಶಾಸ್ತ್ರ ಅಂದರೆ ಮದುವೆ ಮನೆ ಅಂಗಳದಲ್ಲಿ ಕ್ಷೌರಿಕನನ್ನು ಕರೆಯಿಸಿ ಮದುಮಗನನ್ನು ಮಣೆ ಮೇಲೆ ಕೂರಿಸಿ ವರನ ಕೈಕಾಲುಗಳಲ್ಲಿನ ಮುಂದೆ ಬಂದ ಉಗುರುಗಳನ್ನು ಕತ್ತರಿಸಿ

ಮುಖ ಕ್ಷೌರ ಮಾಡುವುದು ಈ ಶಾಸ್ತ್ರದ ಅರ್ಥ. ವಿವಾಹ ಯಾವುದೇ ಜಾತಿಯವರದಾದರೂ ಅದಕ್ಕೆ ಅನ್ಯ ಜಾತಿಯವರ ಸಹಾಯ ಬೇಕೇ ಬೇಕು. ಅವರಲ್ಲೆರು ಶ್ರಮವಿಭಜನೆಯ ತತ್ವದ ರೀತಿಯಲ್ಲಿ ಕೆಲಸವನ್ನು ಹಂಚಿಕೊಂಡು ಮಾಡುತ್ತಾರೆ. ಇದು ಗ್ರಾಮಗಳಲ್ಲಿನ ಸಮುದಾಯ ಭಾವನೆಯನ್ನು ಬಿಂಬಿಸುತ್ತದೆ. ಪ್ರಾಥಮಿಕ ಸಂಬಂಧಗಳ ಗಟ್ಟಿತನವನ್ನು ಇಂತಹ ವಿಶೇಷ ಸಂದರ್ಭಗಳಲ್ಲಿ ಪ್ರದರ್ಶಿತವಾಗುತ್ತವೆ. ಅದಕ್ಕಾಗಿಯೇ ಒಂದೊಂದು ಜಾತಿಯವರಿಗೂ ಒಂದೊಂದು ಮುಖ್ಯ ಕೆಲಸ ವಹಿಸಿಕೊಟ್ಟು ಅವರ ಜಾತಿಯ ಅನಿವಾರ್ಯತೆಯನ್ನು ಈ ಸಂಪ್ರದಾಯದ ಮೂಲಕ ತೋರಿಸುತ್ತದೆ. ಪ್ರಸ್ತುತ ಕಾದಂಬರಿಯಲ್ಲಿ ಮದುವೆ ಹೆಣ್ಣನ್ನು ಹುಡುಕುವ ಸಂದರ್ಭ ಬರುವುದಿಲ್ಲ. ಕಾರಣ ಕಾದಂಬರಿಯಲ್ಲಿ ಸೀತೆ ಮದುವೆ ಹೆಣ್ಣು ಎಂಬುದು ನಿಶ್ಚಿತ. ಆದ್ದರಿಂದ ಮೇಲಿನ ಎಲ್ಲಾ ಪ್ರಕ್ರಿಯೆಗಳೂ ಅಪ್ರಸ್ತುತವಾದರೂ ಮಲೆನಾಡಿನ ಭಾಗದಲ್ಲಿ ಹೆಣ್ಣನ್ನು ಆಯ್ಕೆ ಮಾಡುವಾಗ ಯಾವ ಯಾವ ವಿಧಿವಿಧಾನಗಳನ್ನು ಆಚರಿಸುತ್ತಾರೆ ಎಂಬುದನ್ನು ಪರಿಚಯಿಸುವುದಕ್ಕಾಗಿ ಮಾಹಿತಿ ನೀಡಿದ್ದೇನೆ.

ಉದಾಹರಣೆಗೆ ಮಡಿವಾಳದವನು ಚಪ್ಪರಕ್ಕೆ ಮಡಿ ಬಟ್ಟೆಯನ್ನು ಕಟ್ಟುತ್ತಾನೆ. ಕುಂಬಾರ ಕೇಲು ಗಡಿಗೆಯನ್ನು ಹೊತ್ತುಕೊಂಡು ಬರುತ್ತಾನೆ. ಆಚಾರಿ ಅತ್ತಿಮಣೆ, ತೋರಣದ ಹಲಗೆಯನ್ನು ತರುತ್ತಾನೆ. ಮಾದಾರನು ಹಾಲು ಕಂಬ ತರುತ್ತಾನೆ. ದಾಸಯ್ಯ ಬಂದು ತುಳಸಿ ಪೂಜೆ ಮಾಡಿ ಎಲ್ಲರಿಗೂ ತೀರ್ಥ ಪ್ರಸಾದ ಕೊಡುತ್ತಾರೆ. ಬಣಗಾರ ಗಂಡಿನ ಮನೆಗೆ ಬಾಸಿಂಗ ತಂದು ಕೊಡುತ್ತಾನೆ. ಮ್ಯೊಲಿಯವನು ಓಲಗ ಊದುತ್ತಿರುತ್ತಾನೆ. ಹೀಗೆ ಎಲ್ಲಾ ಜಾತಿಯವರು ಕೂಡ ಈ ವಿವಾಹ ಸಂದರ್ಭದಲ್ಲಿ ತಮ್ಮ ತಮ್ಮ ಪಾಲಿನ ಕೆಲಸವನ್ನು ನಿರ್ವಂಚನೆಯಿಂದ ನಿರ್ವಹಿಸಿ ಕೊಡುತ್ತಾರೆ. ಆ ಮೂಲಕ ಸಮಾಜದ ಪ್ರಾಥಮಿಕ ಸಮೂಹವಾದ ವಿವಾಹದಲ್ಲಿ ಪರಸ್ಪರ ಅವಲಂಬನೆ ಸಂಬಂಧಗಳ ಕೊಂಡಿ. ಕೊಡು ಕೊಳ್ಳು ಸಂಬಂಧವನ್ನು ನೆನೆಪಿಸಿಕೊಳ್ಳಬಹುದು.

**ಉಡ್ಕಿ ಮದುವೆ**

ಈ ಕಾದಂಬರಿಯಲ್ಲಿ ಬರುವ ವಿವಾಹದ ಮತ್ತೊಂದು ಪ್ರಕಾರ ಎಂದರೆ ಈ ಜನಾಂಗದಲ್ಲಿ ಉಡ್ಕಿ ಮದುವೆ ಜಾರಿಯಲ್ಲಿತ್ತು. ಉಡ್ಕಿ ಮದುವೆ ಎಂದರೆ ಗಂಡ ಸತ್ತವಳನ್ನು ಪುನಃ ಮದುವೆ ಮಾಡಿಕೊಳ್ಳುವುದು. ಇದಕ್ಕೆ ಉಡ್ಕಿ ಎಂದು ಹೆಸರು. ಇಲ್ಲಿ ಮದುವೆ ಆಗುವ ಹೆಣ್ಣು ಗಂಡು ಇಬ್ಬರು ಅವರವರ ಬಂಧುಗಳ ಮುಖಾಂತರ ಸರಿಯಾದ ಒಪ್ಪಿಗೆಯನ್ನು ಪಡೆದುಕೊಂಡು ಯಾವ ದಿವಸ ಕೂಡಿಕೆ ಆಗುವುದೆಂದು ನಿಶ್ಚಯಿಸಿ ಆ ದಿನ ಕೇವಲ ನೆಂಟರಿಷ್ಟರನ್ನು ಮಾತ್ರ ಬರಮಾಡಿಕೊಂಡು ವರನ ಮನೆಗೆ ಹೆಣ್ಣನ್ನು ಕರೆದುಕೊಂಡು ಬರುತ್ತಾರೆ. ಆ ದಿನ ರಾತ್ರಿ ತುಳಸಿ ಕಟ್ಟೆಯ ಮುಂಭಾಗ ಕೂಡಿಕೆಯಾಗುವ ಹೆಣ್ಣು ಗಂಡನ್ನು ನಿಲ್ಲಿಸಿ ಪುರೋಹಿತರು ಮಂತ್ರ ಹೇಳ ತಾಳ ಕಟ್ಟಿಸುತ್ತಾರೆ. ಈ ರೀತಿಯ ವಿವಾಹದಲ್ಲಿ ಧಾರೆ ಎರೆದುಕೊಡುವ ಪದ್ಧತಿ ಇಲ್ಲ. ಕೂಡಿಕೆ ಆದ ಮೇಲೆ ಯಥಾವತ್ತಾಗಿ, ಭಾರಿ ಭೋಜನ ವ್ಯವಸ್ಥೆ ಇರುತ್ತದೆ. ಆದರೆ ಇಲ್ಲಿ ಮಾಂಸಾಹಾರದ ಊಟದ ವ್ಯವಸ್ಥೆಯಾಗಿರುತ್ತದೆ.

ಹೀಗೆ ಕುವೆಂಪುರವರ ಕಾದಂಬರಿಯಲ್ಲಿ ಬರುವ ವಿವಾಹದ ಲಕ್ಷಣ ಸಾರ್ವತ್ರಿಕವಲ್ಲ. ಇದು ಕೇವಲ ಒಂದು ಜನಾಂಗಕ್ಕೆ ಮೀಸಲಾದದ್ದು. ಇದೇ ಸಮಾಜದಲ್ಲಿ ಅಸ್ತಿತ್ವದಲ್ಲಿರುವ ಇನ್ನೊಂದು ಪ್ರಮುಖ ಜನಾಂಗ ಹಳೆ ಪೈಕರದವರು. ಇವರನ್ನು ಇಂದು ಈಡಿಗ ಜನಾಂಗ ಎಂದು ಕರೆಯುತ್ತಾರೆ. ಇವರು ಕೂಡ ಗೌಡ ಜನಾಂಗದವರ ವಿವಾಹ ಪದ್ಧತಿಯನ್ನು ಅನುಸರಿಸುತ್ತಾರೆ. ಈ ಎರಡು ಜಾತಿಗಳ ನಡುವೆ ಪರಸ್ಪರ ಸ್ಪರ್ಧೆಯನ್ನು ಕಾಣಬಹುದು. ಹಾಗಾಗಿ ಇಲ್ಲಿಯ ವಿವಾಹ ಪದ್ಧತಿಗಳು ಜಾತಿಯಿಂದ ಜಾತಿಗೆ ಭಿನ್ನತೆಯನ್ನು ಹೊಂದಿರುವುದಂತು ಸತ್ಯ.

ವಿವಾಹ ಬಾಳಿನ ಯಶಸ್ಸಿನ ಸೋಪಾನ ಎನ್ನುವರು. ಜೀವನದ ಅತ್ಯಂತ ಮಧುರವಾದ ಘಳಿಗೆ. ಸುಮಧುರ ಜೀವನಕ್ಕೆ ಅವಶ್ಯಕವಾದ ಪೋಷಕಾಂಶ ಎನ್ನಬಹುದು. ಆದರೆ ಕುವೆಂಪುರವರ ಕಾದಂಬರಿಯಲ್ಲಿ ಪ್ರಸ್ತುತಪಡಿಸಿರುವ ವಿವಾಹಗಳಾವುವು ಈ ಹೇಳಿಕೆಯನ್ನು ಸ್ಪಷ್ಟೀಕರಿಸುವುದಿಲ್ಲ. ಕಾನೂರು ಹೆಗ್ಗಡತಿಯಲ್ಲಿ ಬರುವ ಮದುವೆಗಳೆಲ್ಲವು ದುರಂತದ ಹಾದಿಯನ್ನು ಹಿಡಿಯುವುದನ್ನು ಗಮನಿಸಬಹುದು. ಕುವೆಂಪುರವರ ಈ ಕಾದಂಬರಿಯ ಮುಖ್ಯ ಪಾತ್ರದ ವಿವಾಹವಾಗಬಹುದು ಅಥವಾ ಕೆಲಸಗಾರರ ವಿವಾಹವಾಗಬಹುದು. ಅವೆಲ್ಲವೂ ಸಮಸ್ಯೆಯನ್ನು ಸೃಷ್ಟಿಸದೆ ಬಿಟ್ಟಿಲ್ಲ. ಅಂತಹ ವಿವಾಹಗಳಲ್ಲಿ ಚಂದ್ರಯ್ಯಗೌಡರು – ಸುಬ್ಬಮ್ಮಳ ವಿವಾಹ ತೆಗೆದುಕೊಂಡರೆ ಅದು ದುರಂತಮಯ ಅಂತ್ಯವನ್ನು ಕಾಣುತ್ತದೆ. ವಯಸ್ಸಾದ ವ್ಯಕ್ತಿ ತನ್ನ ಮಗಳನ ವಯಸ್ಸಿನ ಹುಡುಗಿಯನ್ನು ಮದುವೆಯಾದರೆ ಏನಾಗುತ್ತದೆ ಎಂಬುದಕ್ಕೆ ಈ ಪ್ರಾಂತ್ಯದಲ್ಲಿ ಅಸ್ತಿತ್ವದಲ್ಲಿರುವ ಒಂದು ಜನಪ್ರಿಯ ಗಾದೆ ಮಾತು ನೆನಪಿಗೆ ಬರುತ್ತದೆ. ಅಂದರೆ 'ಅರಸಿ ಪಟ್ಟಕ್ಕೆ ಬರುವಾಗ ಅರಸ ಚಟ್ಟಕ್ಕೆ ಏರುತ್ತಾನೆ' ಎಂಬ ಗಾದೆ ಪ್ರಸ್ತುತ ಎನಿಸುತ್ತದೆ. ಆ ಮಾತಿನಂತೆ ಸುಬ್ಬಮ್ಮಳಿಗೆ ಜ್ಞಾನೋದಯವಾಗುವಾಗ ಚಂದ್ರಯ್ಯಗೌಡರು ಇಹಲೋಕದ ಯಾತ್ರೆಯನ್ನು ಮುಗಿಸುತ್ತಾರೆ. ಈ ವಿವಾಹದಿಂದಾಗಿಯೇ ನಗರದಲ್ಲಿ ವಿದ್ಯಾಭ್ಯಾಸ ಮಾಡುತ್ತಿದ್ದ ಮಕ್ಕಳು ಅದನ್ನು ಅರ್ಧಕ್ಕೆ ನಿಲ್ಲಿಸಬೇಕಾಗುತ್ತದೆ. ಮನೆ ಪಾಲಾಗುತ್ತದೆ. ಅಣ್ಣ ತಮ್ಮಂದಿರ ನಡುವೆ ಭಿನ್ನಾಭಿಪ್ರಾಯ ಮನಸ್ತಾಪಗಳು ಉಂಟಾಗುತ್ತದೆ. ಆಸ್ತಿ ಭಾಗವಾಗುತ್ತದೆ. ಚಂದ್ರಯ್ಯ ಗೌಡ ಖಾಯಿಲೆಯಿಂದ ಮರಣಹೊಂದಿದ್ದರೆ ಸುಬ್ಬಮ್ಮ ಸೇರೆಗಾರರೊಂದಿಗೆ ಅನೈತಿಕ ಸಂಬಂಧಕ್ಕೆ ಇಳಿದು ನೈತಿಕ ಅಧಃಪತನದೊಂದಿಗೆ ಅಂತಿಮವಾಗಿ ತನ್ನೆಲ್ಲ ಸೊತ್ತು ಕಳೆದುಕೊಂಡು ಮರಣಹೊಂದುತ್ತಾಳೆ. ಇದನ್ನೆಲ್ಲಾ ಕಣ್ಣಾರೆ ಕಂಡಂತಹ ರಾಮಯ್ಯ ಆತ್ಮಹತ್ಯೆ ಮಾಡಿಕೊಳ್ಳುತ್ತಾನೆ.

ಇನ್ನು ಸೀತೆಯ ವಿವಾಹ ನಿರಂತರ ಪ್ರಕ್ರಿಯೆಯ ರೀತಿ ಕಾಣುತ್ತದೆ. ಅದಕ್ಕೆ ಅಂತ್ಯವೇ ಇಲ್ಲವೇನೂ ಎಂಬ ಹಾಗೆ. ಪ್ರಾರಂಭದಲ್ಲಿ ಸೀತೆ ಮತ್ತು ಹೂವಯ್ಯರ ನಡುವಿನ ಪ್ರೇಮ ವಿಷಯ ಬಹಿರಂಗಪಡಿಸುವ ಕಾದಂಬರಿಕಾರರು ಅದನ್ನ ಶುಭಾಂತ್ಯ ಮಾಡುವುದಿಲ್ಲ. ಬಹುಶಃ ಕುವೆಂಪುರವರ ನನ್ನ ದೇವರು ಎಂಬ ಸಣ್ಣಕಥೆಯಲ್ಲಿ ಬರುವ ಸನ್ನಿವೇಶವೇ ಇಲ್ಲಿಯೂ ಮುಂದುವರಿಯುತ್ತದೆ. ಇದು ಚಾಲ್ತಿಯಲ್ಲಿ ಇರುವ ಹಾಗೆಯೇ. ಸೀತೆ ಮನೆ ಸಿಂಗಪ್ಪಗೌಡರ

ಮಗ ಕೃಷ್ಣಪ್ಪ ಮತ್ತು ಸೀತೆಯ ನಡುವಿನ ವಿವಾಹಗಳಿಗೆ ಪ್ರಯತ್ನ ನಡೆಯುತ್ತದೆ. ಅದೇ ಸಂದರ್ಭದಲ್ಲಿ ಹುಲಿಯ ಆಕ್ರಮಣಕ್ಕೆ ಒಳಗಾಗಿ ಕೃಷ್ಣಪ್ಪ ಸಾಯುತ್ತಾನೆ. ಇನ್ನೇನು ಸೀತೆ-ಹೂವಯ್ಯರ ನಡುವಿನ ವಿವಾಹಕ್ಕೆ ನಿರಾತಂಕವಾಯಿತು ಎನ್ನುವಾಗ, ಸೀತೆಯನ್ನು ರಾಮಯ್ಯನೊಂದಿಗೆ ಮದುವೆ ಮಾಡಲು ಪ್ರಯತ್ನ ನಡೆಯುತ್ತದೆ. ಇದು ದೊಡ್ಡ ಅನಾಹುತ1ದೊಂದಿಗೆ ಮಂಗಳ ಕಾರ್ಯ ಅಮಂಗಳ ರೀತಿಯಲ್ಲಿ ಮುಕ್ತಾಯಗೊಳ್ಳುತ್ತದೆ. ಮತ್ತೆ ರಾಮಯ್ಯನ ಆತ್ಮಹತ್ಯೆ ಸೀತೆ ಒಬ್ಬಂಟಿಗಳು. ಆಕೆಯ ಬದುಕು ಸನ್ಯಾಸಿನಿಯ ರೀತಿಯಾಗುತ್ತದೆ. ಅಂದರೆ ಈ ವಿವಾಹಗಳೆಲ್ಲವೂ ದುರಂತಮಯ ಅಂತ್ಯವನ್ನೆ ಕಾಣುವುದು ದುರಾದೃಷ್ಟಕರ. ಕೆಲಸದಾಳು ಗಂಗೆಯ ವಿವಾಹವು ಅದೇ ರೀತಿಯದು. ಒಟ್ಟಾರೆ ಕುವೆಂಪು ಕಾದಂಬರಿಯಲ್ಲಿ ಹೆಚ್ಚಿನ ವಿವಾಹ ದುರಂತಮಯ. ಬಹುಶಃ ಅದರ ಬಗೆಗಿನ ಒಲವು ಕಡಿಮೆ ಎನಿಸುತ್ತದೆ. ಅವರ ಮಲೆಗಳಲ್ಲಿ ಮದುಮಗಳು ಕಾದಂಬರಿಯಲ್ಲಿಯೂ ಹಾಗೆ. ಅವರ ಲೇಖನ ಆತ್ಮಶ್ರೀಗಾಗಿ ನಿರಂಕುಶ ಮತಿಗಳಾಗಿ ಎಂಬ ಭಾಷಣದಲ್ಲಿಯೂ ವಿವಾಹ ಹೇಗಿರಬೇಕು, ಯಾರು ಆಗಬೇಕು, ಹೇಗೆ ಆಗಬೇಕು ಎಂಬುದರ ಬಗ್ಗೆ ಉಲ್ಲೇಖ ಇರುವುದು ಗಮನಿಸಬೇಕಾದದ್ದು. ಅದಕ್ಕಾಗಿಯೇ ಮಂತ್ರ ಮಾಂಗಲ್ಯದಂತಹ ಪದ್ಧತಿ ಪರಿಚಯಿಸುತ್ತಾರೆ. ಇದಕ್ಕೆ ಮುನ್ಸೂಚನೆಯಾಗಿಯೇ ದುರಂತ ಮದುವೆಗಳನ್ನು ಚಿತ್ರಿಸುತ್ತಾರೆಯೇ ಎಂಬ ಪ್ರಶ್ನೆ ಮಾಡುತ್ತಾದೆ. ಇದಕ್ಕೆ ಮುಂದುವರಿದ ಕೊಂಡಿಯಂತೆ ಅಣ್ಣಯ್ಯಗೌಡರ ನಾಲ್ಕನೆಯ ಮದುವೆ ಪ್ರಯತ್ನ ಇದರಿಂದಾಗಿ ತಂದೆ ಮತ್ತು ಮಗ ಓಬಯ್ಯ ಗೌಡನ ನಡುವೆ ವಿರಸ. ಓಬಯ್ಯ ಈ ಮೂಲಕ ಹಲವು ದುಷ್ಟಟಗಳಿಗೆ ಬಲಿಯಾಗುವುದು. ಕೊನೆಗೆ ಊರನ್ನು ಬಿಟ್ಟು ಹೊರಟ ಅವರು ಒಬ್ಬೊಬ್ಬರೆ ಸಾಯುತ್ತಾರೆ. ಕೊನೆಗೆ ಓಬಯ್ಯ ಮದುವೆಯೆ ಬೇಡ ಎಂದು ಸನ್ಯಾಸಿಯ ಹಾಗೆ ಹೂವಯ್ಯನೊಂದಿಗೆ ಬದುಕುತ್ತಾನೆ. ಇದು ಕೂಡ ದುರಂತವೆ ಸರಿ.

ಒಟ್ಟಾರೆ ಕಾದಂಬರಿಯಲ್ಲಿ ವಿವಾಹದ ಪರಿಕಲ್ಪನೆ ದುರಂತ ಅಂತ್ಯವೆ ಹೆಚ್ಚು. ಮಲೆನಾಡ ಭಾಗದಲ್ಲಿನ ರೀತಿ ನೀತಿ, ಪದ್ದತಿಗಳ ಪರಿಚಯವನ್ನು ಮಾಡಿಕೊಟ್ಟಿದ್ದಾರೆ.

# ಅಧ್ಯಾಯ – 4

## ಸಾಮಾಜಿಕ, ಕೌಟುಂಬಿಕ ಹಿನ್ನಲೆಯ ಸ್ತ್ರೀಪಾತ್ರಗಳು.

ಕಾನೂನು ಹೆಗ್ಗಡತಿ ಕಾದಂಬರಿಯಲ್ಲಿ ಸುಬ್ಬಮ್ಮ, ನಾಗಮ್ಮ, ಸೀತೆ, ಗೌರಮ್ಮ ಪುಟ್ಟಮ್ಮ ಮತ್ತು ಗಂಗೆ ಎಂಬ ಪ್ರಮುಖ ಸ್ತ್ರೀಪಾತ್ರಗಳಿದ್ದು, ಇವುಗಳು ತಮ್ಮ ಸುತ್ತಲಿನ ಸಾಮಾಜಿಕ, ಸಾಂಸ್ಕೃತಿಕ, ಕೌಟುಂಬಿಕ, ಶೈಕ್ಷಣಿಕ, ಆರ್ಥಿಕ ಅಂಶಗಳಿಂದ ಪ್ರಭಾವಿತವಾಗಿದ್ದು, ಅವರ ಒಡನಾಟವು ಸುತ್ತಲಿನ ಪರಿಸರದಿಂದ ರೂಪುಗೊಂಡಂತಹದ್ದು. ಆದ್ದರಿಂದ ಇವು ಒಂದು ಇನ್ನೊಂದಕ್ಕಿಂತ ಭಿನ್ನ ರೀತಿಯಲ್ಲಿ ಗೋಚರಿಸುತ್ತದೆ. ಆ ರೀತಿ ಬಿಂಬಿಸುವ ಪ್ರಯತ್ನಗಳನ್ನು ಪರೋಕ್ಷವಾಗಿ ಗಮನಿಸಬಹುದು. ಒಂದೇ ಕುಟುಂಬದಲ್ಲಿದ್ದು, ಅಲ್ಲಿರುವ ಸ್ತ್ರೀಯರ ನಡುವೆ ಮತ್ಸರ, ಸಂಘರ್ಷ ಇರುತ್ತದೆ. ಇದಕ್ಕೆ ಕಾರಣ ಅವರ ಯೋಚನಾ ಲಹರಿ, ದೃಷ್ಟಿಕೋನ, ಮನೋಭಾವನೆ ಮತ್ತು ಅವರ ಸುತ್ತಲಿನ ಪರಿಸರದ ಪ್ರಭಾವ.

ಸ್ತ್ರೀಯರು ಹೊಂದಿರುವ ಸ್ಥಾನಮಾನವೆಂಬುದು ಯಾವುದೇ ಸಮಾಜದ ಸಾಂಸ್ಕೃತಿಕ ಶ್ರೀಮಂತಿಕೆಯನ್ನು ಮತ್ತು ನಾಗರೀಕತೆಯ ಮುನ್ನಡೆಯನ್ನು ಅಳೆಯುವ ಮಾನದಂಡವಿದ್ದಂತೆ ಎಂಬ ಮಾತಿದೆ. ಈ ಕಾದಂಬರಿಯಲ್ಲಿ ಅಂತಹ ವಿಷಯಗಳನ್ನು ಕಾಣಬಹುದು. ಒಂದು ನಿರ್ದಿಷ್ಟ ಕಾಲ ಮತ್ತು ಮಲೆನಾಡಿನಲ್ಲಿ ಸ್ತ್ರೀಯರು ಹೇಗೆ ಬದುಕುತ್ತಿದ್ದರು. ಸಮಾಜದಲ್ಲಿ ಅವರ ಸ್ಥಾನ ಮಾನಗಳು ಹೇಗಿದ್ದವು ಎಂಬುದು ಚಿತ್ರಿತವಾಗಿದೆ. ಇಲ್ಲಿ ಸ್ತ್ರೀ ಒಂದು ತತ್ವವಾಗಿ, ಶಕ್ತಿಯಾಗಿ ಬೆಳೆಯುತ್ತಾಳೆ. ಈ ಕಾಲದಲ್ಲಿಯೇ ಕೆಳ ವರ್ಗದ ಜನರನ್ನು ಶೂದ್ರರೆಂದು, ಅಸ್ಪೃಶ್ಯರೆಂದು ಅವರೊಂದಿಗೆ ತಾತ್ಸರದಿಂದ ವರ್ತಿಸುವ ಬ್ರಾಹ್ಮಣ ಪುರುಷ ವರ್ಗವು ತಮ್ಮ ಮನೆಯ ಸ್ತ್ರೀಯರ ಬಗ್ಗೆಯೂ ಅದೇ ಧೋರಣೆಯನ್ನು ಮುಂದುವರೆಸುತ್ತದೆ. ಮಲೆನಾಡಿನ ಒಕ್ಕಲಿಗ ಸ್ತ್ರೀಯರನ್ನು ಬ್ರಾಹ್ಮಣ ಮಹಿಳೆಯರಿಗೆ ಹೋಲಿಸಿದರೆ ಸ್ವಲ್ಪ ಮಟ್ಟಿಗೆ ಉತ್ತಮ ಸ್ಥಿತಿಯನ್ನು ಹೊಂದಿದ್ದಾರೆ ಎನ್ನಬಹುದು. ಇಲ್ಲಿ ಆರ್ಥಿಕ, ಸಾಮಾಜಿಕ, ಶೈಕ್ಷಣಿಕ ಪೂರ್ಣ ಸ್ವಾತಂತ್ರ್ಯವನ್ನು ಪಡೆಯದಿದ್ದರು ಅತಿಯಾದ ನಿಬಂಧನೆಗಳಲ್ಲಿ ಆಕೆ ಸಿಲುಕಿಕೊಂಡಿಲ್ಲ. ವ್ಯವಹಾರದಲ್ಲಿ, ಗೃಹಕೃತ್ಯದಲ್ಲಿ ಪುರುಷರೊಂದಿಗೆ ದುಡಿಯುವ ಅವಕಾಶವನ್ನು ಪಡೆದಿದ್ದಾಳೆ.

ವಿಧವೆಯಾದ ಒಕ್ಕಲಿಗ ಮಹಿಳೆ ಯಾವ ಕೀಳರಿಮೆ ಇಲ್ಲದೆಯೂ ಸಮಾಜದಲ್ಲಿ ಸಾಮಾನ್ಯವಾಗಿ ಬಾಳ ಬಹುದಿತ್ತು. ಆದರೆ ಬ್ರಾಹ್ಮಣ ಮಹಿಳೆಯರಿಗೆ ಆ ರೀತಿಯ ಸ್ವಾತಂತ್ರ್ಯ ಇರಲಿಲ್ಲ. ಉದಹಾರಣೆಗಾಗಿ ನಾಗಮ್ಮ ಮತ್ತು ಸುಬ್ಬಮ್ಮರನ್ನು ನೋಡಬಹುದು. ಅವರ ವ್ಯವಹಾರ ಕುಶಲತೆಯು ಗಂಡಸಿನ ರೀತಿಯಲ್ಲಿಯೇ ಇರುತ್ತದೆ. ಇಲ್ಲಿ ವಯಸ್ಸಾದ ಮಹಿಳೆಗೂ ಆದರಣಿಯಾ ಸ್ಥಾನಮಾನಗಳಿದ್ದವು.

ಇನ್ನೊಂದು ಗಮನಾರ್ಹವಾದ ಅಂಶವೆಂದರೆ ಒಕ್ಕಲಿಗರ ಹೆಣ್ಣು ತನಗೆ ಅನ್ಯಾಯವಾದಗಲೆಲ್ಲ ಪೂರ್ಣವಾಗಿ ಒಪ್ಪಿಕೊಂಡು ಸುಮ್ಮನಿರುವುದಿಲ್ಲ. ನಾಗಮ್ಮ ಕೂಡ ಅನ್ಯಾಯ ಅವಮಾನಗಳನ್ನು ಪ್ರತಿಭಟಿಸಿದ್ದರಿಂದಲೆ ಚಂದ್ರಯ್ಯ ಗೌಡರು ಹಿಸ್ಸೆ ಕೊಟ್ಟಿದ್ದು. ಸೀತೆಯಂತ ಸುಸಂಸ್ಕೃತ ಹೆಣ್ಣು ಕೂಡ ತನಗಾದ ಅನ್ಯಾಯಕ್ಕೆ ಪ್ರತಿಯಾಗಿ ವಿಚಿತ್ರ ರೀತಿಯಲ್ಲಿ ಸೇಡು ತೀರಿಸಿಕೊಳ್ಳುತ್ತಾಳೆ. ಹುಚ್ಚು ಹಿಡಿದಂತೆ, ದೆವ್ವ ಬಂದಂತೆ ವರ್ತಿಸುತ್ತಾಳೆ. ಕೊನೆಗೂ ತನ್ನ ಆದರ್ಶಪಾಲನೆಗಾಗಿ ಮನೆ ಬಿಟ್ಟು ಬಂದು ವೈರಾಗಿಯಂತೆ ಬದುಕು ಸಾಗಿಸುತ್ತಾಳೆ. ಇಲ್ಲಿ ನಾಗಮ್ಮ, ಸೀತೆಯಂತವರ ಅಲ್ಪ ಪ್ರತಿಭಟನೆಯು ಹೆಚ್ಚು ಅರ್ಥ ಪಡೆದುಕೊಳ್ಳುತ್ತದೆ. ಅವರ ಧ್ವನಿ ಎಷ್ಟೇ ಕ್ಷೀಣವಾಗಿದ್ದರು ಗಮನಾರ್ಹವಾಗಿರುತ್ತದೆ. ಆದರೆ ಕೆಳಜಾತಿಯವರೆಂದು ಭಾವಿಸಲಾದ ಹೊಲೆಯರು, ಜೀತದಾಳುಗಳು, ಗಟ್ಟದಾಳುಗಳ ಸ್ತ್ರೀಯರು ಹೆಚ್ಚು ಸ್ವಾತಂತ್ರ್ಯ ವ್ಯಕ್ತಿತ್ವ ಪಡೆದುಕೊಂಡಿದ್ದಾರೆ. ಪುರುಷರ ಸರಿಸಮಾನ ಸ್ಥಾನಮಾನ ಹೊಂದಿದ್ದಾರೆ. ಬೇಲರ, ಬಿಲ್ಲವರ, ಹಸಲರ, ಹೊಲೆಯರ ಸ್ತ್ರೀಯರು ತಮ್ಮ ತಮ್ಮ ಪುರುಷರಂತೆ ಎಲ್ಲಾ ಕೆಲಸ ಕಾರ್ಯಗಳಲ್ಲೂ ಕಾಣಿಸಿ ಕೊಂಡಿದ್ದಾರೆ. ಕೃಷಿ, ಕೂಲಿ, ಬೇಟೆಯಲ್ಲಿ ಪುರುಷರಂತೆ ದುಡಿದು ಸ್ವಾತಂತ್ರ್ಯ ಅನುಭವಿಸಿದ್ದಾಳೆ.

ಮಹಿಳೆಯಲ್ಲಿಯು ಚಾಣಕ್ಷತನಕ್ಕೆ ಬರವಿಲ್ಲ ಎಂಬುದಕ್ಕೆ ಗಂಗೆ ಪಾತ್ರ ನಿದರ್ಶನ. ಘಟ್ಟದ ಕೆಳಗಿನವಳಾದ ಇವಳು ತನ್ನ ಅನೈತಿಕ ಬದುಕಿನಿಂದ ಪಾರಾಗಲು ಮಲೆನಾಡಿಗೆ ಬಂದಿರುವ ಆಕೆ ಮುಗ್ಧಳಾದ ಹಳ್ಳಿಯ ಸುಬ್ಬಮ್ಮನನ್ನು ಅನೈತಿಕತೆಗೆ ಇಳಸುತ್ತಾಳೆ. ಅವಳ ದೌರ್ಬಲ್ಯಗಳನ್ನು ಕೆರಳಸಿ ಅನೀತಿಗೆ ಇಳಸುತ್ತಾಳೆ. ಒಂದೆಡೆ ಸೇರೆಗಾರ ಇನ್ನೊಂದೆಡೆ ಚಂದ್ರಯ್ಯ ಗೌಡ ಮತ್ತೊಂದೆಡೆ ಓಬಯ್ಯ ಗೌಡನೊಂದಿಗೆ ಲೈಂಗಿಕ ಸಂಬಂಧ ಇಟ್ಟುಕೊಂಡ ಇವಳು ಒಂದು ರೀತಿಯ ಮೃಗೀಯ ಗುಣಗಳನ್ನು ಬೆಳೆಸಿಕೊಂಡವಳು.

ಮಹಿಳೆಯರನ್ನು ಜಾತಿ, ಅಂತಸ್ತು, ವರ್ಗಗಳಗೆ ಸಂಬಂಧಿಸಿದಂತೆ ಅರ್ಥೈಸುತ್ತಾ ಬಂದರೆ ಇಲ್ಲಿ ಸ್ಪಷ್ಟವಾಗುವುದು ಮೇಲು ಜಾತಿಯ ಸ್ತ್ರೀಯರಿಗಿಂತ ಕೆಳ ಜಾತಿ ಮತ್ತು ವರ್ಗದವರು ಹೆಚ್ಚು ಸ್ವಾತ್ರಂತ್ರ್ಯ ಸಮಾನತೆ ಪಡೆದಿರುವುದು. ತಮ್ಮ ಅವಶ್ಯಕತೆಯನ್ನು ಆವರೆ ಪೂರೈಸಿಕೊಳ್ಳುತ್ತಾರೆ. ಆದರೆ ಮೇಲಿನ ವರ್ಗದವರು ಈ ರೀತಿ ಮಾಡಲು ಸಾಧ್ಯವಾಗುವುದಿಲ್ಲ. ಅವರು ಯಾವಾಗಲೂ ಪುರುಷರ ಅಧೀನದಲ್ಲಿಯೇ ಇರಬೇಕಾಗುತ್ತದೆ. ಪ್ರತಿ ಮಹಿಳೆಯ ಅಂತಸ್ತಿಗೆ ತಕ್ಕಂತೆ ಯೋಚನೆಗಳು, ದೃಷ್ಟಿ ಕೋನಗಳು, ಅಚಾರ ವಿಚಾರಗಳು, ಆಹಾರ ಪದ್ಧತಿಗಳು, ಮನೋಭಾವಗಳು, ವರ್ತನೆಗಳು, ಉಡುಪುಗಳು ಎಲ್ಲವೂ ಭಿನ್ನವಾಗಿರುತ್ತದೆ. ಮೇಲ್ವರ್ಗದ ಮಹಿಳೆಯರು ಸುಸಂಸ್ಕೃತವಾದ ನಡುವಳಿಕೆ ಹೊಂದಿದ್ದರೆ, ಕೆಳ ವರ್ಗದ ಮಹಿಳೆಯರು ಒರಟಾಗಿ, ಕೊಳಕರಾಗಿ ಕಾಣಿಸಿಕೊಳ್ಳುತ್ತಾರೆ. ಇಂತಹ ಭಿನ್ನತೆಗೆ ಮೊದಲೇ ಹೇಳದ ಅಂಶಗಳು ಕಾರಣವಾಗುತ್ತದೆ. ಮೇಲಿನ ಅಂಶಗಳು ಏನೇ ಹೇಳದರು ಸ್ತ್ರೀಯು ಎಲ್ಲಾ ಕಾಲದಲ್ಲು ಶೋಷಣೆಗೆ ಒಳಗಾಗಿದ್ದಾಳೆ. ಈ ಕಾದಂಬರಿಯಲ್ಲಿಯು ಅದೇ ಶೋಷಣೆ ಬೇರೆ ರೀತಿ ಕಾಣುತ್ತದೆ. ಆದ್ದರಿಂದ ಅವರ ಸಂಪೂರ್ಣ ಪರಿಚಯ, ಸ್ವಭಾವ, ವರ್ತನೆ ಈ ಕೆಳಕಂಡಂತೆ ಗುರುತಿಸಬಹುದು.

## ಸುಬ್ಬಮ್ಮ

ಸುಬ್ಬಮ್ಮಳು ನೆಲ್ಲು ಹಳ್ಳಿಯ ಪದ್ದೇ ಗೌಡರ ಮಗಳು. ಮೂಲತಃ ಬಡತನದಲಿ ಹುಟ್ಟಿದವಳು. ಬಡತನವನ್ನೆ ಹಾಸಿ, ಉಟ್ಟು ಬೆಳೆದವಳು. ಅದೃಷ್ಟ ಎಂಬಂತೆ ಚಂದ್ರೇ ಗೌಡರನ್ನು ಮದುವೆಯಾಗಿ ಶ್ರೀಮಂತ ಕುಟುಂಬದ ಸದಸ್ಯೆಯಾಗುತ್ತಾಳೆ. ಗಂಡನಿಗೆ ಹೋಲಿಸಿದರೆ ತುಂಬಾ ಕಿರಿಯ ವಯಸ್ಸು ಈಕೆಯದು. ಬಡ, ವಿಭಕ್ತ ಕುಟುಂಬದಿಂದ ಬಂದ ಇವಳು ಶ್ರೀಮಂತ ಅವಿಭಕ್ತ ಕುಟುಂಬ ಮತ್ತು ಇದ್ದದ್ದರಲ್ಲೆ ನಾಗರೀಕವಾದ ಕುಟುಂಬವನ್ನ ಸೇರಿ ತಾನು ಹಿಂದೆಂದೂ ನೋಡಿರದ, ಅನುಭವಿಸಿರದ, ಅನುಭವಗಳಿಂದಾಗಿ ಹೊಸ ಮನೆಗೆ ಹೊಂದಿಕೊಳ್ಳಲಾರದೆ ಕಾದಂಬರಿಯ ಉದ್ದಕ್ಕೂ ಚಡಪಡಿಸುತ್ತಾಳೆ. ಈಡೇರಲಾರದ ಆಸೆಗಳು, ವಯಸ್ಸಾದ ಗಂಡನ ಸಂಶಯದಿಂದ ತೊಳಲಾಡುವ ಸುಬ್ಬಮ್ಮ ಒಂದು ಕಡೆ ಗಂಡನನ್ನು ಕಳೆದುಕೊಂಡು ಸೇರೆಗಾರ ರಂಗಪ್ಪ ಸೆಟ್ಟಿಯ ಲೈಂಗಿಕ ವಾಂಛೆಗೆ ಬಲಿಯಾಗುತ್ತಾಳೆ. ಅಂತಿಮವಾಗಿ ದಾರುಣ ರೀತಿಯಲ್ಲಿ ಸಾಯುತ್ತಾಳೆ.

ಈ ಎಲ್ಲಾ ಘಟನೆಗಳ ಹಿಂದೆ ಸುಬ್ಬಮ್ಮಳ ಮೇಲೆ ಸಾಮಾಜಿಕ, ಆರ್ಥಿಕ, ಸಾಂಸ್ಕೃತಿಕ, ಶೈಕ್ಷಣಿಕ ಅಂಶಗಳ ಪ್ರಭಾವ ನಿರಂತರವಾಗಿ ಕಾಣಬಹುದು. ಸುಬ್ಬಮ್ಮಳ ಜೀವನದಲ್ಲಿ ಆಗುವ ಪ್ರತಿ ಬದಲಾವಣೆಯ ಹಿಂದೆ ಈ ಅಂಶಗಳ ಕೈವಾಡವಿರುವುದು ಕಂಡುಬರುತ್ತದೆ. ಇವಳ ಬಡತನದ ಕಾರಣದಿಂದಾಗಿಯೆ ಒರಟು ಸ್ವಭಾವವನ್ನು ಮೈಗೂಡಿಸಿಕೊಂಡವಳು. ಪುರುಷರಿಗೆ ಸಮಾನವಾಗಿ ದುಡಿಯುವ ಚೈತನ್ಯ ಇರುವವಳು. ತನ್ನ ಪರಿಸರದಲ್ಲಿ ಯಾವುದು ಸರಿಯೋ ಅದೇ ನಡೆ, ನುಡಿ, ಆಚಾರ ವಿಚಾರಗಳನ್ನು ಕಲಿತ ಸುಬ್ಬಮ್ಮಳಲ್ಲಿ ಸ್ತ್ರೀ ಸಹಜವಾದ ಮೃದುತ್ವ, ನಾಚಿಕೆ, ನಯವಿನಯ, ಸಂಯಮ ಎಲ್ಲದರಲ್ಲಿಯೂ ಕೊರತೆ ಎದ್ದು ಕಾಣುತ್ತದೆ.

ಒಬ್ಬ ಸುಸಂಸ್ಕೃತ, ಸಂಪ್ರದಾಯಸ್ಥ, ಅಕ್ಷರಸ್ಥ ಸ್ತ್ರೀ ವಿಧುರ ವಿವಾಹದಂತಹ ಹೊಂದಾಣಿಕೆಯನ್ನು ಸುಬ್ಬಮ್ಮಳಷ್ಟು ಸುಲಭವಾಗಿ ಮಾಡಿಕೊಳ್ಳಲು ಸಾಧ್ಯವೆ ಇಲ್ಲ. ಇಲ್ಲಿ ಅವಳಿಗೆ ಶ್ರೀಮಂತಿಕೆ ಮಾತ್ರ ಮುಖ್ಯವಾಗುತ್ತದೆಯೇ ವಿನಃ ಬೇರಾವ ವಿಷಯವು ಗಮನಕ್ಕೆ ಬರುವುದಿಲ್ಲ. ಬಂದರು ಇದಕ್ಕಿಂತ ಹೆಚ್ಚಿನದನ್ನು ಬಯಸಲು ಅವಳ ಪರಿಸ್ಥಿತಿಯ ಅರಿವು ಅವಳಿಗಿದೆ. ಏಕೆಂದರೆ ಇಂದಲ್ಲ ನಾಳೆ ಯಾವುದಾದರೂ ಒಬ್ಬ ಬಡ ರೈತನ ಕೈ ಹಿಡಿದು ಜೀವನ ಪೂರ್ತಿ ಕಷ್ಟ ಪಡುವ ಬದಲು ಇದೇ ಮೇಲು ಎಂಬುದು ಅವಳ ಅಭಿಪ್ರಾಯ. ಆದ್ದರಿಂದ ಸಂತೋಷದಿಂದಲೇ ಚಂದ್ರೇ ಗೌಡರನ್ನು ಮದುವೆಯಾಗಿ ಕಾನೂರಿನ ಹೆಗ್ಗಡತಿಯಾಗುತ್ತಾಳೆ. ಹೀಗಿದ್ದ ಸುಬ್ಬಮ್ಮ ಒಂದು ಸಾರಿ ಶ್ರೀಮಂತಿಕೆ ಬಂದಾಗ ಅವಳಲ್ಲಿ ಅಗಾದವಾದ ಬದಲಾವಣೆ ನಡೆಯುತ್ತದೆ. ಅವಳಲ್ಲಿ ಅದುವರೆಗೂ ಸುಪ್ತವಾಗಿದ್ದ ಅಹಂಕಾರ, ದರ್ಪ, ಸ್ವಾರ್ಥ, ಮತ್ಸರ, ದುರಭಿಮಾನ, ಜಾಗೃತವಾಗುತ್ತದೆ. ಹುಟ್ಟಿನಿಂದಲೇ ಶ್ರೀಮಂತರಿಗೂ, ನಂತರದಲ್ಲಿ ಬಂದ ಶ್ರೀಮಂತಿಕೆಗೆ ಭಾರಿ ವ್ಯತ್ಯಾಸವಿದೆ. ಸುಬ್ಬಮ್ಮ ಇದರಲ್ಲಿ ಎರಡನೆಯ ಸಾಲಿನವಳು. ಅದಕ್ಕಾಗಿ ಅವಳಲ್ಲಿ ಇದ್ದಕ್ಕಿದ್ದಂತೆ ದರ್ಪ, ಹಟ, ಸಿಡುಕು, ಸ್ವಭಾವ ಜಾಗೃತವಾಗಿ ಅವಳನ್ನು ಕಠೋರಳನ್ನಾಗಿ ಮಾಡುತ್ತದೆ. ಇದನ್ನು ಕಾದಂಬರಿಕಾರರು ಒಂದು ಸಣ್ಣ ಘಟನೆಯ ಮೂಲಕ ವಿವರಿಸುತ್ತಾರೆ.

"ಸುಬ್ಬಮ್ಮ ಕಾನೂರು ಹೆಗ್ಗಡತಿಯಾದ ಕೂಡಲೆ ಅವಳಲ್ಲಿದ್ದ ಕಾಡು ಭಾವಗಳು, ಭಯಾನಕವಾಗಿ ಹೆಡೆಯೆತ್ತಿ ನಿಂತವು. ಆಕೆ ಎಲ್ಲದರಲ್ಲಿಯೂ, ಎಲ್ಲರ ಮೇಲೆಯೂ ನಿರ್ದಾಕ್ಷಿಣ್ಯವಾಗಿ ಹುಕುಂ ಚಲಾಯಿಸ ತೊಡಗಿದಳು. ಪ್ರತಿಯೊಂದರಲ್ಲಿಯೂ ಸಣ್ಣಬುದ್ಧಿಯೇ ಪ್ರಕಾಶಿತವಾಯಿತು. ಅದು ಎಷ್ಟು ಅಧೋಗತಿಗೆ ಇಳಿಯಿತೆಂದರೆ ಹುಟ್ಟಿನಿಂದಲೂ ಸಾಬೂನಿನ ಹೆಸರು ಕೇಳದೆ ಇದ್ದ ಆಕೆ, ಒಂದು ಸಾರಿ ನಾಗಮ್ಮನವರು ವಾಸುವಿನ ಮೈಗೆ ತನ್ನ ಸಾಬೂನು ಹಚ್ಚಿದರೆಂದು ಕೇಳ ಬಾಯಿಗೆ ಬಂದಂತೆ ಬಯ್ದುಬಿಟ್ಟಳಂತೆ. ನಾಗಮ್ಮನವರಿಗೆ ಆ ಹೊಸ ಕಾಡು ರಾಣಿಯ ಆಳ್ವಿಕೆ ಸರಿ ಬೀಳಲಿಲ್ಲ. ಪುಟ್ಟಮ್ಮನಿಗಂತೂ ಸುಬ್ಬಮ್ಮಳ ನೆರಳು ಕಂಡರೂ ಆಗದಂತಾಯಿತು. ತುಪ್ಪ, ಬೆಣ್ಣೆ ಮೊದಲಾದ ಪದಾರ್ಥಗಳಂತೂ ಆ ಹೆಗ್ಗಡತಿ ಬೀಗ ಮುದ್ರೆ ಮಾಡಿ ಬಿಟ್ಟಳು. ಹೀಗಾಗಿ ಮನೆಯಲ್ಲಿ ಮೂರು ಹೊತ್ತು ಕದನವಾಗಿ ನೆಮ್ಮದಿಯೆ ತಪ್ಪಿಹೋಯಿತು" (ಕಾನೂರು ಹೆಗ್ಗಡತಿ ಪುಟ ಸಂಖ್ಯೆ 43).

ಸಾಮಾಜಿಕವಾಗಿ ಸುಬ್ಬಮ್ಮಳಿಗೆ ತನ್ನ ಸರಿಕರೊಂದಿಗೂ ಹಾಗೂ ಸೇರಿದ ಮನೆಯಲ್ಲಿ ಹೇಗಿರಬೇಕು ಎಂಬ ಪ್ರಾಥಮಿಕ ಜ್ಞಾನವು ಇರಲಿಲ್ಲ. ಶ್ರೀಮಂತ ಮಹಿಳೆಯರ ಘನತೆ, ಗಾಂಭೀರ್ಯ ಯಾವುದು ಇವಳಲ್ಲಿಲ್ಲ. ಯಾರೊಂದಿಗೆ ಹೇಗೆ ವರ್ತಿಸಬೇಕು ಎಂಬುದು ತಿಳಿದಿಲ್ಲ. ಕೆಲಸದ ಆಳಾದ ಗಂಗೆಯಲ್ಲಿ ವೈಯಕ್ತಿಕ ವಿಷಯವನ್ನೆಲ್ಲಾ ಹೇಳಿಕೊಳ್ಳುತ್ತಾಳೆ. ಎಷ್ಟು ಮುಗ್ಧೆ ಎಂದರೆ ತನ್ನ ಗಂಡ ಪರ ಸ್ತ್ರೀಯ ಕೈಯಲ್ಲಿ ಜಡೆ ಬಾಚಿಸಿಕೊಳ್ಳುತ್ತಿದ್ದರು ಇವಳಿಗೆ ಏನು ಅನಿಸುವುದಿಲ್ಲ. ಕೆಲಸದವರೊಂದಿಗೆ ಸಲಿಗೆಯಿಂದ ವರ್ತಿಸಬಾರದು ಎಂದು ನಾಗಮ್ಮ ಕಿವಿಮಾತು ಹೇಳಿದರು ಸುಬ್ಬಮ್ಮ ಕೇಳಿಸಿಕೊಳ್ಳುವುದಿಲ್ಲ. ಗಂಗೆ ಮತ್ತು ಸುಬ್ಬಮ್ಮಳ ಸಂಬಂಧ ಚಂದ್ರೇಗೌಡರಾದಿಯಾಗಿ ಎಲ್ಲರಿಗು ಇಷ್ಟವಿರದ ಸಂಬಂಧ. ಇದಕ್ಕೆ ಅವಳು ಕೆಲಸದವಳು ಎಂಬುದು ಹಾಗೂ ಜಾತಿಯಲ್ಲಿ ಕೀಳು ಎಂಬುದು ಕಾರಣವಾಯಿತು.

ಸುಬ್ಬಮ್ಮಳಲ್ಲಿ ವಿಶೇಷ ಗುಣ ಎಂದರೆ ಗ್ರಾಮ್ಯ ಸಹಜವಾದ ಮುಗ್ಧತೆ. ಅವಳಿಗೆ ಹೇಳಿಕೊಳ್ಳುವ ಸಂಬಂಧಿಗಳು ಇರಲಿಲ್ಲ. ಗಂಡನ ಕಡೆಯ ಬಾಂಧವರು ಬಂದಾಗ ಹೇಗೆ ವರ್ತಿಸಬೇಕು ಎಂಬುದು ತಿಳಿದಿಲ್ಲ. ಮನೆಯಲ್ಲಿನ ಎಲ್ಲಾ ಆಹಾರ ಪದಾರ್ಥಗಳಿಗೂ ಬೀಗ ಹಾಕಿ ಇಡುತ್ತಿದ್ದಳು. ಅವಳಿಗೆ ತಿಳಿಯದೆ ಯಾವುದೇ ವಸ್ತು ತೆಗೆಯುವ ಹಾಗೆಯೇ ಇರಲಿಲ್ಲ. ಗಂಡನ ಮನೆಯವರು ಸುಸಂಸ್ಕೃತಿಯ ದೃಷ್ಟಿಯಿಂದ ಬಹು ದೂರವಾಗಿದ್ದರು ಅವರ ಮಟ್ಟಕ್ಕೇರಿ ಮಾತಾಡಲು ಅವಳಿಗಾಗುತ್ತಿರಲಿಲ್ಲ. ಬೈಗುಳದಲ್ಲಿ ಮಾತ್ರ ಎಲ್ಲರಿಗಿಂತಲೂ ಹೆಚ್ಚು ಜಯಶಾಲಿಯಾಗಿದ್ದಳು. ಸುಬ್ಬಮ್ಮಳ ಮತ್ತೊಂದು ದೌರ್ಬಲ್ಯ ಎಂದರೆ ಆಕೆ ಬಹಳ ಬೇಗೆ ಹೊಗಳುವಿಕೆಗೆ ಮೈಮರೆಯುತ್ತಿದ್ದಳು. ಯಾರೆ ಬಂದು ಅವರ ಸಮಸ್ಯೆ ಹೇಳಿಕೊಂಡರೆ ಇವಳು ಸಹ ತನ್ನ ಸ್ಥಾನಮಾನ, ಅಂತಸ್ತು, ಗೌರವ ಮರೆತು ಎಲ್ಲಾವನ್ನು ಹೇಳಿಕೊಳ್ಳುವಳು.

ಬಡತನ ವ್ಯಕ್ತಿಯ ವ್ಯಕ್ತಿತ್ವದ ಮೇಲೆ ಪ್ರಭಾವ ಬೀರುತ್ತದೆ ಎಂಬುದು ಸುಬ್ಬಮ್ಮಳಿಂದ ಮತ್ತಷ್ಟು ಸ್ಪಷ್ಟವಾಗುತ್ತದೆ. ಅವಳ ಜೀವನದ ಬಹುಪಾಲು ವಿಚಾರಗಳಿಗೆ ಅವಳ ಈ ಪರಿಸ್ಥಿತಿಯೇ

ಕಾರಣ. ಆಕೆಗೆ ಸಾಮಾಜಿಕ ಒಡನಾಟ, ಜ್ಞಾನ, ಹೇಗೆ ಇಲ್ಲವೊ ಹಾಗೆಯೇ ವ್ಯವಹಾರ ಜ್ಞಾನವು ಕಡಿಮೆ, ವ್ಯವಹಾರದಲ್ಲಿ ಆಕೆ ಎಷ್ಟು ಹಿಂದುಳಿದಿದ್ದಳು ಎಂದರೆ ನೂರು ರೂಪಾಯಿಯ ನೋಟು ಹೇಗಿರುತ್ತದೆ ಎಂಬುದು ತಿಳಿದಿಲ್ಲ. ಕಾರಣ ಆವರೆಗೂ ಅವಳಿಗೆ ದುಡಿಯುವುದು ಮಾತ್ರ ಗೊತ್ತು. ಯಾವ ವ್ಯವಹಾರವನ್ನು ಮಾಡಲು ಅವಳಿಗೆ ಅವಕಾಶವೇ ಒದಗಿ ಬಂದಿರಲಿಲ್ಲ. ಆದ್ದರಿಂದ ಹರಿದ ನೋಟಗಳ ಎರಡು ತುಂಡನ್ನು ಅವಳು ಸಾಲವಾಗಿ ಓಬಯ್ಯಗೌಡನಿಗೆ ನೀಡುತ್ತಾಳೆ. ಹೀಗೆ ಒಂದೊಮ್ಮೆ ಅನಕ್ಷರಸ್ಥಳಾಗಿ, ವ್ಯವಹಾರ ಜ್ಞಾನ ಇಲ್ಲದವಳಾಗಿ, ಅಸಂಸ್ಕೃತೆಯಾಗಿ ಚಿತ್ರಿತವಾದ ಸುಬ್ಬಮ್ಮಳ ಮೇಲೆ ಚಂದ್ರಯ್ಯಗೌಡರ ಸಂಶಯದ ಬುದ್ಧಿ ನಿರಂತರ ದಾಳ ಮಾಡತೊಡಗುತ್ತದೆ. ಕಾದಂಬರಿಕಾರರು ಹೇಳುವಂತೆ,

> "ಇತ್ತಿಚೇಗೆ ಸುಬ್ಬಮ್ಮನ ಮೇಲೆ ಗೌಡರ ವರ್ತನೆ ಹುಚ್ಚು, ಹುಚ್ಚಾಗಿ ಬರಬರುತ್ತಾ ಕ್ರೂರವಾಗಿತ್ತು. ದೇಹ ದೌರ್ಬಲ್ಯದೊಡನೆ ಅವರಲ್ಲಿ ಸಂಶಯ ಪ್ರಕೃತಿಯು ವೃದ್ಧಿಸಿತು. ಸುಬ್ಬಮ್ಮ ತಮ್ಮನ್ನು ಒಲಿಯುವುದಂತಿರಲಿ, ತಮ್ಮನ್ನು ಕಂಡರೆ ಆಕೆಗೆ ಆಗುವುದಿಲ್ಲ ಎಂಬ ಭಾವವೂ ಬೆಳೆಯಿತು. ಜೊತೆಗೆ ಆಕೆ ಪತಿವೃತೆಯಾಗಿಲ್ಲ ಎಂಬ ಗೂಡ ಭಾವದ ಕೀಟವು ಅವರ ಎದೆ ಮಿದುಳಿನಲ್ಲಿ ಗೂಡು ಕಟ್ಟಿತು. ಸ್ವಲ್ಪ ಕಾರಣಗಳಿಗೂ, ಕೆಲವು ಸಾರಿ ಕಾರಣಗಳನ್ನು ಕಲ್ಪಿಸಿಕೊಂಡು ಆಕೆಯನ್ನು ಹೊಡೆಯುತ್ತಿದ್ದರು. ಬಯ್ಯುತ್ತಿದ್ದರು. ಸದಾ ಕರಕರೆಯ ಬಾಳನ್ನು ಬಾಳುತ್ತಿದ್ದು, ಆಕೆ ಬರ ಬರುತ್ತಾ ಕೃಶಳಾದಳು. ಅದನ್ನು ಕಂಡು ಗೌಡರಿಗೆ ಮತ್ತಷ್ಟು ರೇಗಿತು. ರೋಗಗ್ರಸ್ತವಾದ ಅವರ ಮಿದುಳಿನಲ್ಲಿ ಕರಾಳ ಕಲ್ಪನೆಯ ಪಿಶಾಚಿಯು ಕುಣಿಯ ತೊಡಗಿತು". (ಕಾನೂರು ಹೆಗ್ಗಡತಿ ಪುಟ ಸಂಖ್ಯೆ 411).

ಇದನ್ನೆಲ್ಲ ಹೇಗಾದರೂ ಸಹಿಸಿಕೊಳ್ಳುತ್ತಾಳೆ. ಆದರೆ ತನ್ನ ಒಡವೆ, ವಸ್ತಗಳು ಪರರ ಪಾಲಾಗುವುದನ್ನು, ಕಷ್ಟ ದಾರಿದ್ರ್ಯದಲ್ಲಿ ಬೆಳೆದಿದ್ದ ಸುಬ್ಬಮ್ಮಳಿಗೆ ಸಹಿಸಲಾಗುವುದಿಲ್ಲ. ಆಗ ಗಂಡನಿಗೆ ಪ್ರತಿಯಾಗಿ ಮಾತಾಡಲು ಪ್ರಾರಂಭಿಸಿದಳು. ಇದರಿಂದ ಚಂದ್ರೇ ಗೌಡರು ಕತ್ತಿ ಹಿಡಿದು ಆಕೆಯನ್ನು ಕೊಲ್ಲಲು ಮುಂದಾದರು. ಅಲ್ಲಿಂದ ತಪ್ಪಿಸಿಕೊಂಡ ಇವಳು ತವರು ಮನೆ ಹಾದಿ ಹಿಡಿಯುತ್ತಾಳೆ. ಆದರೆ ಅಲ್ಲಿ ಗಂಡನ ಮನೆಗಿಂತ ಭಿನ್ನ ಸಮಸ್ಯೆಯನ್ನು ಎದುರಿಸಬೇಕಾಗುತ್ತದೆ. ಸಮಾಜದ ಮತ್ತು ತನ್ನ ಅತ್ತಿಗೆಯಿಂದಲು ನಿಂದನೆಯನ್ನು ಅನುಭವಿಸಬೇಕಾಗುತ್ತದೆ. ಅದು ಎಷ್ಟು ಕ್ರೂರವಾಗಿತ್ತು ಎಂದರೆ ಇದಕ್ಕಿಂತ ಗಂಡನ ಮನೆಯೇ ವಾಸಿ ಎನ್ನುವ ಹಾಗಾಗುತ್ತದೆ.

ಅಂತಿಮವಾಗಿ ಚಂದ್ರಯ್ಯ ಗೌಡರ ಮರಣಶಯ್ಯೆಯಲ್ಲಿರುವಾಗ ಸುಬ್ಬಮ್ಮ ಅವರ ಹೆಂಡತಿಯಾಗಿ ಸೇವೆಗೆ ಅಣಿಯಾಗುತ್ತಾಳೆ. ಆಗ ಗೌಡರು ಅವಳನ್ನು ತುಂಬಾ ಇಷ್ಟಪಡತೊಡಗುತ್ತಾರೆ. ಆದರೆ ಆಗಲೇ ಸಮಯ ಜಾರಿ ಹೋಗಿರುತ್ತದೆ.

## ಮತ್ತೊಮ್ಮೆ ಕಾನೂರು ಮನೆಯ ಯಜಮಾನಿಯಾದ ಸುಬ್ಬಮ್ಮಳ ದಾರುಣ ಅಂತ್ಯ

ಚಂದ್ರಯ್ಯ ಗೌಡರ ಅಂತಿಮ ದಿನಗಳಲ್ಲಿ ಕಾನೂರಿಗೆ ಹಿಂತಿರುಗಿದ್ದ ಸುಬ್ಬಮ್ಮ ತನ್ನ ಹಿಂದಿನ ಸಿಡುಕು, ದರ್ಪ, ಕ್ರೌರ್ಯ ಎಲ್ಲಾ ತೊರೆದು ತನ್ನ ಪತಿಯ ಸೇವೆಯಲ್ಲಿಯೇ ತಲ್ಲೀನವಾಗಿದ್ದಳು. ಈ ಸಂದರ್ಭದಲ್ಲಿ ಸುಬ್ಬಮ್ಮಳನ್ನು ಕಂಡ ಪತಿಗೆ ಆಶ್ಚರ್ಯವಾಗುತ್ತಿತ್ತು. ಅದೇ ಸಂದರ್ಭದಲ್ಲಿ ಸುಬ್ಬಮ್ಮಳನ್ನು ಕಂಡವರಿಗೆ ಆಶ್ಚರ್ಯವಾಗುತ್ತಿತ್ತು. ಅದೇ ಸಂದರ್ಭದಲ್ಲಿ ಚಂದ್ರಯ್ಯಗೌಡರ ಮರಣ ಸಂಭವಿಸುತ್ತದೆ. ಇದರಿಂದ ಸುಬ್ಬಮ್ಮ ಭಾರಿ ಆಘಾತಕ್ಕೆ ಒಳಗಾಗುತ್ತಾಳೆ. ಆಕೆಗೆ ತನ್ನ ಮುಂದಿನ ಭವಿಷ್ಯ ನೆನೆದು ಹೆದರಿಕೆಯೇ ಆಗುತ್ತದೆ. ಯಾಕೆಂದರೆ ತವರು ಮನೆಯ ಅನುಭವ ಅವಳ ಮುಂದಿತ್ತು. ಅದಕ್ಕಾಗಿಯೇ ಆಕೆ ಸದಾ ಅಳುತ್ತಿದ್ದಳು. ಆದರೆ ಸಮಾಜ ಅದನ್ನು ತಪ್ಪಾಗಿ ಗ್ರಹಿಸುತ್ತಿತ್ತು. ಗಂಡನ ಮರಣಕ್ಕಾಗಿಯೆ ಅಳುತ್ತಿದ್ದಾಳೆ ಎಂದು. ಆದರೆ ಕಾಲ ಎಲ್ಲಾವನ್ನು ಮರೆಸುತ್ತದೆ. ಸೇರೆಗಾರ ರಂಗಪ್ಪ ಸೆಟ್ಟಿಯ ಅಭಯ ಹಸ್ತ ಅವಳವರೆಗೂ ಚಾಚುತ್ತದೆ. ಅವರ ಸಂತೈಸುವಿಕೆಯಿಂದ ಸುಬ್ಬಮ್ಮಳಲ್ಲಿ ಬಾರಿ ಬದಲಾವಣೆಗಳಾಗುತ್ತದೆ. ತಾನು ಕಾನೂರು ಮನೆಗೆ ಸರ್ವಾಧಿಕಾರಿಣಿಯಾದ ಹೆಗ್ಗಡತಿ ಎಂಬ ಮಾತು ಕೇಳಿ ಹೊಸ ಪಟ್ಟ ಸಿಕ್ಕಿದಂತೆ ಉತ್ಸಾಹಗೊಂಡಳು. ಸೇರೆಗಾರರ ಸಹಾಯದಿಂದ ಕಾನೂರು ಹೆಗ್ಗಡತಿಯಾಗಿ ಎಲ್ಲಾರ ಗೌರವ ಪ್ರಶಂಸೆಗೆ ಪಾತ್ರಳಾಗುತ್ತೇನೆಂದು ನಿರ್ಧರಿಸುತ್ತಾಳೆ.

ಸುಬ್ಬಮ್ಮಳೇನೋ ನಿರ್ಧಾರ ಮಾಡಿ ಪುರುಷ ರೀತಿಯಲ್ಲಿ ಮನೆ ಹಾಗೂ ಹೊರಗಿನ ಕೆಲಸದಲ್ಲಿ ದಕ್ಷತೆಯಿಂದಲೂ, ಉತ್ಸಾಹದಿಂದಲೂ ಪಾಲ್ಗೋಂಡಳು. ಸುಬ್ಬಮ್ಮಳ ಮುಂದಾಳತ್ವದಲ್ಲಿ ಸೇರೆಗಾರರು, ಗಟ್ಟದಾಳುಗಳು, ಬೇಲರು ತಪ್ಪದೇ ದುಡಿಯಬೇಕಾಗಿತ್ತು. ಆಕೆ ಕೆಲಸ ನಡೆಯಬೇಕಾದ ಎಲ್ಲಾ ಕಡೆ ಇದ್ದು ಮೇಲ್ವಿಚಾರಣೆ ಮಾಡುತ್ತಿದ್ದಳು. ಇದರಿಂದಾಗಿ ಮತ್ತೆ ಅವಳಲ್ಲಿ ಗಡಸುತನ, ಕ್ರೌರ್ಯ, ದರ್ಪ, ಧೂರ್ತ ವರ್ತನೆ ಕಾಣಿಸಲು ಶುರುವಾಯಿತು. ಅದನ್ನು ಕಾದಂಬರಿಕಾರರು ಈ ರೀತಿ ವಿಶ್ಲೇಷಿಸುತ್ತಾರೆ.

ಸುಬ್ಬಮ್ಮಳಲ್ಲಿ ಆಸೆಯ ಪ್ರಭಾವ ಮೆಲ್ಲ ಮೆಲ್ಲನೆ ಬೆಳೆದು ಅಪ್ರತಿಹತವಾಗಿತ್ತು. ಆಕೆಯ ಅಪ್ಪಣೆಯ ಹೊರತು ಯಾರು ಹೆಜ್ಜೆ ಇಡುತ್ತಿರಲಿಲ್ಲ. ಗಂಡನ ಗದ್ದುಗೆಗೆ ತಾನು ಏರಿದ್ದೇನೆ ಎಂಬ ಶ್ರದ್ಧೆಯಿಂದ ಆಕೆಯಲ್ಲಿ ದರ್ಪವೂ, ಕಾಠಿಣ್ಯವೂ, ಒಂದಿನಿತು ಕ್ರೌರ್ಯ ಸಮ್ಮಿಶ್ರವಾದ ದೂರ್ತತೆ ಮೊಳೆತು ಬೆಳೆಯುತ್ತಿದ್ದವು. ಅಧಿಕಾರ ಮದದೊಡನೆ ಯೌವ್ವನ ಮದವು ಕೂಡಿತ್ತು. ತಾರುಣ್ಯದ ಗಿರಿಶಿಖರವೇರುವ ಹೆಣ್ಣು ಅಧಿಕಾರಿಯಾದರೆ ಅನೇಕರು ಅನೇಕ ಕಾರಣಗಳಂದ ಅವಳಿಗೆ ಆಳಾಗಿ ಅವಳ ವ್ಯಕ್ತಿತ್ವಕ್ಕೆ ತಲೆಬಾಗುತ್ತಾರೆ. ಕಿವಿಗಳಲ್ಲಿ, ಮೂಗಿನಲ್ಲಿ ಒಡವೆಗಳಿಲ್ಲದಿದ್ದರೂ ವಿಧವೆಯಾದ ಸುಂದರ ತರುಣಿ ದಟ್ಟವಾಗಿ ಬೆಳೆದ ತಲೆ ಕೂದಲನ್ನು ಬಾಚಿ ಬೈತಲೆ ತೆಗೆದು ತುರುಬು ಕಟ್ಟಿ, ಕಾಗಿನ ಸೀರೆಯನ್ನು ಬಿಗಿದು ಮಲೆನಾಡಿನ ಉಡುಗೆಯುಟ್ಟು, ಕೈಕಡಗದಿಂದಲೂ, ಸುಪುಷ್ಟ ಕಾಯದಿಂದಲೂ, ತುಂಬಿದೆದೆಗಳಂದಲೂ, ದುಂಡು ಮೊಗದಿಂದಲೂ ಹುಕುಂ

ಚಲಾಯಿಸುತ್ತಾ ಎದುರು ನಿಂತರೆ ಯಾರು ತಾನೇ ಕೆಲಸ ಮಾಡುವುದಿಲ್ಲ. ಸುಬ್ಬಮ್ಮನ ಪ್ರಭಾವಕ್ಕೆ ಕಾರಣ ಅರೆ ಪಾಲು ಆಕೆಯ ತಾರುಣ್ಯ ವ್ಯಕ್ತಿತ್ವವಾಗಿತ್ತು. ಆದರೆ ಆಕೆಗೆ ಮಾತ್ರ ಆ ಗುಟ್ಟು ತಿಳಿದಿರಲಿಲ್ಲ.

ಈ ರೀತಿಯ ಹೆಣ್ಣನ್ನು ಮೋಡಿ ಮಾಡಿದ ರಂಗಪ್ಪ ಸೆಟ್ಟಿ ಆಕೆಯೊಡನೆ ಅನೈತಿಕ ಸಂಬಂಧಕ್ಕೆ ಇಳಿಯುತ್ತಾನೆ. ಪ್ರಾರಂಭದಲ್ಲಿ ನಿರಾಕರಿಸಿದ ಸುಬ್ಬಮ್ಮ ನಂತರ ಅನುಭವಿಸುತ್ತಾಳೆ. ತನ್ನ ನೈತಿಕ ಅಧಃಪತನ ಅರಿವು ಇದ್ದರು ಅದರಿಂದ ಹೊರ ಬರಲಾರದೆ ಗರ್ಭಿಣಿಯಾಗುತ್ತಾಳೆ. ಈ ಸಂಕಟದಿಂದ ಹೊರಬರಲು ಪುನಃ ಆಕೆ ಆಶ್ರಯಿಸುವುದು ಗಂಗೆಯನ್ನ. ಈ ಸನ್ನಿವೇಶವನ್ನ ತನ್ನ ಪರವಾಗಿ ತಿರುಗಿಸಿಕೊಂಡ ಗಂಗೆ ಸುಬ್ಬಮ್ಮಳಿಂದ ಒಡವೆ, ವಸ್ತ್ರ ಎಲ್ಲಾವನ್ನು ಪಡೆದುಕೊಂಡು ಅವಳ ಕೈಗೊಂದಿಷ್ಟು ಔಷಧಿ ನೀಡಿ ಹೇಗೆ ಪ್ರಯೋಗಿಸುವುದು ತಿಳಿಸದೆ ಪಲಾಯನ ಮಾಡುತ್ತಾಳೆ. ಇತ್ತ ಸುಬ್ಬಮ್ಮ ಆ ಔಷಧಿ ತಿಂದು ಇಹಲೋಕದ ಯಾತ್ರೆ ಮುಗಿಸುತ್ತಾಳೆ.

ಕಾದಂಬರಿಕಾರರು ಕೂಡ ನೈತಿಕ ಅವನತಿ ಹೊಂದಿದ ಮಹಿಳೆಯರಿಗೆ ಇಂತಹ ಹೀನ ಸಾವೇ ಗತಿ ಎಂದು ಸಮಾಜಕ್ಕೆ ಸಂದೇಶ ರವಾನಿಸುತ್ತಾರೆ. ಸುಬ್ಬಮ್ಮಳಗಿಂತ ಹೆಚ್ಚು ಪಾಪ ಕ್ರೌರ್ಯ ಮಾಡಿದ ಚಂದ್ರೇ ಗೌಡರಿಗೆ ಗೌರವದ ಸಾವನ್ನು ಪ್ರಸಾದಿಸಿದವರು ಹೆಣ್ಣಿಗೆ ಮಾತ್ರ ಶಿಕ್ಷೆ ಎಂಬಂತೆ ಸಾವನ್ನು ಚಿತ್ರಿಸುತ್ತಾರೆ. ಆ ಮೂಲಕ ಗಂಡು ಮತ್ತು ಹೆಣ್ಣಿನ ನಡುವೆ ಸಮಾಜದಲ್ಲಿರುವ ತಾರತಮ್ಯತೆಯನ್ನು ತೋರಿಸುತ್ತಾರೆ. ಒಟ್ಟಾರೆ ಸುಬ್ಬಮ್ಮ ಒರಟಾದ, ಅನಕ್ಷರಸ್ಥಳಾದ, ಬಡವಳಾದ, ಅಸಂಸ್ಕೃತ ಹೆಣ್ಣು ಕೂಡ ಒಂದಿಷ್ಟು ಪ್ರೀತಿ, ವಿಶ್ವಾಸ ತೋರಿಸಿದರೆ ತನ್ನೆಲ್ಲ ಸರ್ವಸ್ವವನ್ನು ಬಿಟ್ಟು ಕೊಡುತ್ತಾಳೆ ಎಂಬುದಕ್ಕೆ ಸಾಕ್ಷಿಯಾಗಿ ನಿಲ್ಲಿಸುತ್ತಾರೆ. ಇಲ್ಲಿ ಲೇಖಕರು ಪುರುಷ ಪ್ರಧಾನವಾದ ದೋರಣೆಯನ್ನು ತೋರಿಸುತ್ತಾರೆ.

## ನಾಗಮ್ಮ

ನಾಗಮ್ಮನವರು ಚಂದ್ರಯ್ಯ ಗೌಡರ ಅಣ್ಣನಾದ ಸುಬ್ಬಯ್ಯಗೌಡರ ಹೆಂಡತಿ ಅಂದರೆ ಹೂವಯ್ಯನ ತಾಯಿ. ಈಕೆ ವಿಧವೆ ಇವರ ಏಕೈಕ ಆಶಾಕಿರಣ ಎಂದರೆ ಮಗ ಮಾತ್ರ ತನ್ನ ಗಂಡ ಬದುಕಿದ್ದ ಕಾಲದಲ್ಲಿ ಈಕೆಯೇ ಮನೆಯ ಯಜಮಾನಿ. ಆದರೆ ಅವರ ಮರಣಾನಂತರ ಆ ಪಟ್ಟದಿಂದಲೂ ಹಿಂದೆ ಸರಿದು ತನ್ನ ಮಗನ ನೆನಪಿನಲ್ಲಿ ಪುಟ್ಟಮ್ಮ ಮತ್ತು ವಾಸುವಿನ ಆರೈಕೆ ಮಾಡುತ್ತಾ ಸಮಯ ಕಳೆಯುತ್ತಿರುತ್ತಾರೆ. ಆ ಕಾಲದ ಬ್ರಾಹ್ಮಣ ವಿಧವೆಯರಿಗೆ ಹೋಲಿಕೆ ಮಾಡಿದರೆ ಇವರ ಜೀವನ ಉತ್ತಮವಾಗಿಯೇ ಇತ್ತು ಎನ್ನಬಹುದು. ಮಲೆನಾಡಿನ ಒಕ್ಕಲಿಗ ಜನಾಂಗದ ವಿಧವೆ ಮಹಿಳೆಯರು ಯಾವ ಕೀಳರಮೆಯು ಇಲ್ಲದೆ ಸಮಾಜದಲ್ಲಿ ಬಾಳ ಬಹುದಿತ್ತು. ಗಂಡನನ್ನು ಕಳೆದುಕೊಂಡಿದ್ದ ಕಾನೂರು ಸುಬ್ಬಯ್ಯ ಗೌಡರ ಹೆಂಡತಿ ನಾಗಮ್ಮ ಎಲ್ಲಾರ ಗೌರವ, ಅಧಾರಗಳಿಗೆ ಪಾತ್ರರಾಗಿದ್ದರು. ಇವರ ವಿಶೇಷತೆ ಎಂದರೆ, ತಾನೂ ವಿಧವೆಯಾಗಿದ್ದರು ತನಗೆ ಯಾರ ಬೆಂಬಲವು ಇಲ್ಲದಿದ್ದರು ಕ್ರೂರವಾಗಿ ವರ್ತಿಸುವ ಚಂದ್ರಯ್ಯ ಗೌಡರ ಎದುರು ಸೆಟೆದು ನಿಲ್ಲುವ, ಅನ್ಯಾಯವನ್ನು ಖಂಡಿಸುವ ಧೈರ್ಯವನ್ನು ತೋರುತ್ತಾರೆ.

ಗೌಡರ ಎದುರು ಸೆಟೆದು ನಿಲ್ಲುವ, ಅನ್ಯಾಯವನ್ನು ಖಂಡಿಸುವ ಧೈರ್ಯವನ್ನು ತೋರುತ್ತಾರೆ. ನಾಗಮ್ಮ ಅನ್ಯಾಯ, ಅವಮಾನಗಳನ್ನು ಪ್ರತಿಭಟಿಸುವುದರಿಂದಲೇ ಚಂದ್ರಯ್ಯ ಗೌಡರು ಅಂಜಿ ಪಾಲು ಕೊಡಲು ಮುಂದಾಗುತ್ತಾರೆ.

ನಾಗಮ್ಮನವರದು ಸಂಪ್ರದಾಯಸ್ಥ ಮನೋಭಾವನೆ. ಪ್ರತಿಯೊಂದು ವಿಚಾರಗಳಲ್ಲು ಸಂಪ್ರದಾಯ ಕಾಣುವವರು. ಪುಟ್ಟಮ್ಮಳ ಮದುವೆಯ ಕರೆಯೋಲೆ ಸರಿಯಾಗಿ ಅಂದರೆ ಸಂಪ್ರದಾಯದ ರೀತಿ ಬಂದು ಕರೆದಿಲ್ಲ ಎಂದು ಮದುವೆಗೆ ಹೋಗದೆ ಕಣ್ಣೀರು ಹಾಕುತ್ತಾರೆ. ಅವಳ ಮದುವೆಗೆ ಹೋಗಲಾಗದಿದ್ದಕ್ಕೆ ದಾರಿಯ ಮಧ್ಯದಲ್ಲಿ ಚಪ್ಪರ ಹಾಕಿಸಿ ದಿಬ್ಬಣದವರಿಗೆ ಕುಡಿಯಲು ಪಾನಕದ ವ್ಯವಸ್ಥೆ ಮಾಡುವ ಮೂಲಕ ಮದುಮಗಳನ್ನು ಕಾಣುವ ಆಸೆಯನ್ನು ಈಡೇರಿಸಿಕೊಳ್ಳುತ್ತಾರೆ.

ನಾಗಮ್ಮನವರಿಗೆ ಕೇವಲ ಮಾನವೀಯ ಸಂಬಂಧಗಳ ಬಗ್ಗೆ ಮಾತ್ರ ಒಲವು ಎನ್ನುವಂತಿಲ್ಲ. ಪ್ರಾಣಿಗಳ ಮೇಲು ಅಷ್ಟೇ ಪ್ರೀತಿ. ತನ್ನ ತವರು ಮನೆಯಿಂದ ಬಳುವಳಿಯ ರೂಪದಲ್ಲಿ ಬಂದಿದ್ದ ಕೌಲಿ ಎಂಬ ಹಸು ಕರು ಹಾಕಿದಾಗ ತನ್ನ ಮನೆಯಲ್ಲಿ ಶಿಶುವಿನ ಜನನವಾದಷ್ಟೇ ಸಂತೋಷಿಸುತ್ತಾರೆ. ಅದೇ ರೀತಿ ಭಲೀಂದ್ರ ಎಂಬ ಹೋತವನ್ನು ಬಲಿಯಿಂದ ರಕ್ಷಿಸಿದ ಹೂವಯ್ಯ ಅದನ್ನು ಮನೆಯಲ್ಲಿ ಸಾಕುವಾಗಲು ಈ ಮೇಲಿನ ಅಂಶ ವ್ಯಕ್ತವಾಗುತ್ತದೆ. ನಾಗಮ್ಮನವರು ತಮ್ಮ ಮಗನ ಸಾನಿಧ್ಯದಿಂದ ಎಷ್ಟೇ ಸಾಧ್ವಿ ಎನಿಸಿಕೊಂಡರು ಸಾಮಾನ್ಯ ಜನರಿಂದ ಭಿನ್ನವಾಗಿರಲು ಸಾಧ್ಯವಾಗಲೇ ಇಲ್ಲ ಎನ್ನಬಹುದು. ಕಾದಂಬರಿಕಾರರು ಕೂಡ ಅವರಿಗೆ ವಿಶೇಷ ಸ್ಥಾನ ಕಲ್ಪಿಸಿದರು ಕೂಡ, ಅವರಿಗೂ ಕಳ್ಳು ಕುಡಿಸುವ ಮೂಲಕ ಆ ಕಾಲದ ಮಹಿಳೆಯರೆಲ್ಲ ಒಂದೇ ಎಂದು ತೋರಿಸುತ್ತಾರೆ. ಹೂವಯ್ಯನ ಮೂಲಕ ಮದ್ಯಪಾನ ಮಹಾಪಾಪ ಎನ್ನುವಂತೆ ಸಂದೇಶ ನೀಡುವ ಲೇಖಕರು ನಾಯಕನ ತಾಯಿಯ ಕುಡಿತದ ಅಭ್ಯಾಸ ನಿಲ್ಲಿಸಲಾಗದಿದ್ದನ್ನು ತೋರಿಸುತ್ತಾರೆ.

ನಾಗಮ್ಮನವರು ಬಹುತೇಕ ಎಲ್ಲಾ ವಿಷಯಗಳಲ್ಲು ಆದರ್ಶಮಾತೆಯಾಗಿದ್ದರು. ಆದರೆ ಎರಡು ವಿಷಯಗಳಲ್ಲಿ ಮಾತ್ರ ಸ್ತ್ರೀ ಸಹಜವಾದ ಬುದ್ಧಿಯನ್ನು ಪ್ರದರ್ಶಿಸುತ್ತಾರೆ. ಆ ವಿಷಯದಲ್ಲಿ ಅವರನ್ನು ತಿದ್ದುವುದು ಹೂವಯ್ಯನಿಗೂ ಸಾಧ್ಯವಾಗುವುದಿಲ್ಲ. ಅವುಗಳು ಎಂದರೆ ದೇವರು, ದೆವ್ವ ವಿಷಯದಲ್ಲಿನ ನಂಬಿಕೆ ಅಥವಾ ಮೂಢನಂಬಿಕೆ. ಇನ್ನೊಂದು ಬಾಯಿಯ ಚಪಲವಾದ ಹುಳಿ ಹೆಂಡವನ್ನು ಹೀರುವುದು. ನಾಗಮ್ಮನೇನು ನಿರಂತರವಾಗಿ ಪ್ರತಿ ದಿನ ಮದ್ಯಸೇವನೆ ಮಾಡುತ್ತಿರಲಿಲ್ಲ. ಮಗನ ಸಾಮಿಪ್ಯದ ಪ್ರಭಾವದಿಂದಾಗಿ ತಿಂಗಳಲ್ಲಿ ಒಂದೋ ಎರಡೋ ಭಾರಿ ಸೇವಿಸುವವರೆಗೆ ಸಂಯಮ ಸಾಧಿಸಿದ್ದರು. ಈ ಮೂಲಕವಾದರೂ ಮಗನ ಮನಸ್ಸಿಗೆ ಮೆಚ್ಚುಗೆಯಾಗುವಂತೆ ನಡೆದುಕೊಳ್ಳಲು ಪ್ರಯತ್ನ ಮಾಡುತ್ತಾರೆ. ಆದರೆ ಬಾಲ್ಯದಿಂದಲೂ ವಂಶಪಾರಂಪರ್ಯವಾಗಿ ಬಂದಿದ್ದ ಆ ಚಾಳಿಯಿಂದ ದೂರ ಉಳಿಯುವುದು ಕಷ್ಟವೇ ಆಗಿತ್ತು. ಅವರೆ ಹೇಳುವ ಹಾಗೆ ಈ ಚಟದಿಂದ ಹೊರಬರುವುದು "ಅತ್ತ ಕಡೆ ಹೋದ ಮೇಲೆಯೇ" ಎಂದು ಹೇಳುತ್ತಿದ್ದರು.

ಸಂಪ್ರದಾಯದಂತೆ ದೇವರು, ದೆವ್ವ, ಭೂತಗಳಿಗೆ ತಪ್ಪದೇ ನಡೆದುಕೊಳ್ಳುತ್ತಿದ್ದರು. ಮಗನಿಗೆ ಅದರಲ್ಲಿ ಆಸಕ್ತಿ, ನಂಬಿಕೆ ಇಲ್ಲದಿದ್ದರೂ ತಮ್ಮ ಆತ್ಮ ಸಂತೃಪ್ತಿಗಾಗಿ ಆಚರಣೆ ಮಾಡುತ್ತಿದ್ದರು. ಮಗನ ಮೇಲೆ ಅವರಿಗೆ ಇನ್ನಿಲ್ಲದ ಮಮಕಾರ. ಮಗನ ಬೆನ್ನು ನೋವಾಗಿದೆ ಎಂದಾಗ ಮಾನಸಿಕ ಸ್ಥಿಮಿತ ಕಳೆದುಕೊಂಡವರ ಹಾಗೆ ವರ್ತಿಸುತ್ತಿದ್ದರು. ಕೂಡಲೇ ಕಾಸುಗಳನ್ನು ಸುತ್ತು ಬರಿಸಿ ದೇವರು ಭೂತಗಳಿಗೆ ಮುಡಿಪು ತೆಗೆದಿಡುತ್ತಾರೆ. ಇದು ಅವರ ಧಾರ್ಮಿಕ ಆಚರಣೆಯ ಪ್ರತೀಕವಾಗಿತ್ತು.

ನಾಗಮ್ಮನವರ ಅಕಾಲಿಕ ಮರಣಕ್ಕೆ ಕಾರಣ ಭೂತರಾಯನಿಗೆ ಬಿಟ್ಟಿದ್ದ ಹೋತವನ್ನು ಬಲಿಯಿಂದ ತಪ್ಪಿಸಿ ಸಾಕಿದ್ದೆ ಕಾರಣ ಎಂದು ಬಲವಾಗಿ ನಂಬುತ್ತಾರೆ. ಆದರೆ ಬಲಿ ಕೊಡದ ಹೊರತು ತಾನು ಉಳಿಯುವುದಿಲ್ಲ ಎಂದು ತಿಳಿದು ಆ ಸಂದರ್ಭದಲ್ಲಿ ಈ ರೀತಿ ಹೇಳುತ್ತಾರೆ " ಎಲ್ಲಾ ಭೂತರಾಯನ ಚೇಷ್ಟೆ ಕಣೋ. ಅದಕ್ಕೆ ಕೂಡು ಬಲಿಯನ್ನು ಕೊಡದೆ ಮೋಸ ಮಾಡಿ ಇಟ್ಟುಕೊಂಡರೆ, ಅದಕ್ಕೆ ಬದಲಾಗಿ ನನ್ನ ತಗೋಂಡು ಹೋಗ್ದೆ ಇರ್ತದೆನೋ ? ಸಾಕು ಬಿಡು ನಿನ್ನ ಜೌಸ್ತಿಯಿಂದ ಏನಾಗ್ತದೊ, ನನ್ನ ತಗೋಂಡು ಹೋದ್ರು ಚಿಂತೆಯಿಲ್ಲ ಕಣೋ ನೀನು ನಿನ್ನ ಹೋತ ಸುಖವಾಗಿರ್ರೊ" ಎಂದು ದುಃಖದಿಂದ ಪ್ರಲಾಪಿಸುತ್ತಾರೆ. ಬಲೀಂದ್ರ ಹೋತವನ್ನು ಬಲಿಕೊಟ್ಟರೆ ತಾಯಿಯ ನಂಬಿಕೆಯ ಬಲದಿಂದ ರೋಗ ವಾಸಿಯಾಗಬಹುದು ಎಂದು ಬಲಿಗೆ ಸಿದ್ಧತೆ ಮಾಡಿಕೊಳ್ಳಲು ಸೋಮ ಭೈರನನ್ನು ನೇಮಿಸಿದ ಸುದ್ದಿ ತಿಳಿದು ಸಂತೋಷಗೊಳ್ಳುತ್ತಾರೆ. ಇದರಿಂದ ನಾಗಮ್ಮರ ದೇಹಸ್ಥಿತಿಯಲ್ಲಿ ಅಲ್ಪ ಸುಧಾರಣೆ ಕಂಡುಬಂದರೂ ಅಂತಿಮವಾಗಿ ಹೂವಯ್ಯನ ಹತ್ತಿರ ಮದುವೆ ಮಾಡಿಕೊಳ್ತೀನಿ ಎಂಬ ಭಾಷೆಯನ್ನು ಪಡೆದು ಇಹಲೋಕದ ಯಾತ್ರೆ ಮುಗಿಸುತ್ತಾರೆ.

ಒಟ್ಟಾರೆ ನಾಗಮ್ಮರದು ಸುಸಂಸ್ಕೃತ, ಸಂಪ್ರದಾಯಸ್ಥ, ಮರ್ಯಾದಸ್ಥ ಬದುಕು. ಯಾರಿಗೆ ಅವರನ್ನು ನೋಡಿದರು ಗೌರವಿಸಬೇಕು ಎಂಬಂತೆ ಬಾಳ ಬದುಕಿದವರು. ಆದರೆ ಸುಬ್ಬಮ್ಮಳಿಂದ ಪ್ರಾರಂಭದಲ್ಲಿ ಮನೋಕ್ಲೇಶಕ್ಕೆ ಒಳಗಾದಂತೆ ಕಂಡು ಬಂದರು ಪುಟ್ಟಮ್ಮ ಆಶ್ರಯ ಬಯಸಿ ಬಂದಾಗ ಅವಳಿಗೂ ಆಹಾರ, ಆಶ್ರಯ ಕೊಟ್ಟು ಸಲುಹಿದವರು. ತೇಜೋಮೂರ್ತಿಯಂತೆ ಬಾಳ ಬದುಕಿದ ಮಹಾತಾಯಿಯವರು.

## ಗೌರಮ್ಮ

ಮುತ್ತಳ್ಳಿ ಶಾಮೇಗೌಡರ ಧರ್ಮ ಪತ್ನಿ. ಚಿನ್ನಯ್ಯ, ಸೀತೆ ಮತ್ತು ಲಕ್ಷ್ಮೀಗೆ ಮಾತೃ. ಮಗನಾದ ಚಿನ್ನಯ್ಯನಿಗೆ ತಾಯಿ ಎಂದರೆ ಎಲ್ಲಿಲ್ಲದ ಪ್ರೀತಿ. ಅದಕ್ಕೆ ಕಾರಣ ಗೌರಮ್ಮರ ಗರತಿ ಗಾಂಭೀರ್ಯ, ಪಾವಿತ್ರ್ಯತೆ, ನಿಸ್ವಾರ್ಥ, ಸಹಿಷ್ಣುತೆಯ ವರ್ತನೆ, ಕಾದಂಬರಿಕಾರರು ಈ ಪಾತ್ರಕ್ಕೆ ಹೆಚ್ಚು ಪ್ರಾಧಾನ್ಯತೆ ನೀಡಿಲ್ಲ. ಇಡೀ ಕಾದಂಬರಿಯಲ್ಲಿ ನಾಯಕಿ ಸೀತೆಯ ಪಾತ್ರ ಎಲ್ಲಾ ಕಡೆ ಕಂಡು ಬಂದರೂ, ಅವಳ ತಾಯಿಯಾದ ಗೌರಮ್ಮರ ಪಾತ್ರ ಕಡಿಮೆ ಎನ್ನಬಹುದು. ಕೇವಲ ಎರಡು, ಮೂರು ಬಾರಿ ಬಂದು ಹೋಗುವುದು ಮಾತ್ರ. ಈ ಪಾತ್ರವನ್ನು ಕಾದಂಬರಿಕಾರರು

ಎರಡು, ಮೂರು ಬಾರಿ ಬಂದು ಹೋಗುವುದು ಮಾತ್ರ. ಈ ಪಾತ್ರವನ್ನು ಕಾದಂಬರಿಕಾರರು ಗೌರವದಿಂದ ಕಾಣುತ್ತಾರೆ ಎನ್ನಲು ಕಾರಣ. ಕಾದಂಬರಿಯಲ್ಲಿ ಬರುವ ಸನ್ನಿವೇಶವೇ ಸಾಕ್ಷಿ. ಆ ಪಾತ್ರದ ಪ್ರವೇಶ ಭಿನ್ನ ರೀತಿಯಲ್ಲಿ ಆಗುತ್ತದೆ.

> "ಗೌರಮ್ಮನವರು ದನದ ಕೊಟ್ಟಿಗೆಯಿಂದ ಹಾಲು ತುಂಬಿದ್ದ ಹಿತ್ತಾಳೆಯ ತಂಬಿಗೆಯನ್ನು ಕೈಯಲ್ಲಿ ಹಿಡಿದುಕೊಂಡು ಬರುತ್ತಿದ್ದರು. ಅವರ ಅಂಗಾಲು, ಮೇಗಾಲು ಬೆರಳ ಸಂದುಗಳಲ್ಲಿ ಹಸಿ ಹಸಿಯಾದ ಹಸರು ಮಿಶ್ರವಾದ ಕರಿಬಣ್ಣದ ಸೆಗಣಿ ಮೆತ್ತಿಕೊಂಡಿತು. ಸೀರೆಯನ್ನು ಸ್ವಲ್ಪ ಮೇಲೆತ್ತಿ ಕಟ್ಟಿಕೊಂಡಿದ್ದರಿಂದ ದಂತದ ಬಣ್ಣದ ಕಾಲುಗಳ ಕೆಳಭಾಗವು ಸೆಗಣಿಯ ಬಣ್ಣಕ್ಕೆ ತಾರತಮ್ಯವಾಗಿತ್ತು. ಹೆಜ್ಜೆ ಇಟ್ಟಂತೆಲ್ಲ ಅವರ ಕೈಗಳ ಕಡಗ ಮತ್ತು ಬಳೆಯಿಂದ ಹೊರ ಹೊಮ್ಮುತ್ತಿದ ಝಣತ್ಕಾರವು ಚಿನ್ನಯ್ಯನ ಮನಸ್ಸಿಗೆ ತಾಯಿಯ ಪ್ರೀತಿಯ ಮಹಿಮೆಯನ್ನು ಸಾರುವ ಡಿಂಡಿಮದಂತಿತ್ತು" (ಕಾನೂರು ಹೆಗ್ಗಡತಿ ಪುಟ ಸಂಖ್ಯೆ ೩೦)

ಗೌರಮ್ಮರದು ಸುಖಮಯವಾದ, ಸಂತೋಷದ, ಕೊರತೆ ಇರದ ಸಮೃದ್ಧ ಜೀವನ. ಅವರು ಮನೆಯ ವ್ಯವಹಾರ ಮಾತ್ರ ನೋಡಿಕೊಂಡು, ಗಂಡನ ಜೊತೆಗಾರ್ತಿಯಾಗಿ, ಮಕ್ಕಳ ಅಕ್ಕರೆಯ ತಾಯಿಯಾಗಿ ಜೀವನ ನಡೆಸುತ್ತಿದ್ದರು. ಯಾರಿಗೇ ಆಗಲಿ ಗೌರಮ್ಮನನ್ನು ಕಂಡರೆ ಮಾತೃ ಗೌರವ ತೋರುವಂತೆ ಇದ್ದರು. ಅವರ ಸಂಭಾಷಣ ಕೌಶಲ್ಯವು ತುಂಬಾ ಹಿತವಾಗಿರುತ್ತಿತ್ತು. ಅವರು ಮಾತಿಗಾಗಿಯೇ ಮಾತನ್ನು ಪ್ರಾರಂಭಿಸುತ್ತಿದ್ದರು. ಗೌರಮ್ಮ ಸ್ನೇಹಮೂರ್ತಿ ಎಂಬುದು ಅವರ ವ್ಯಕ್ತಿತ್ವದ ಇನ್ನೊಂದು ಮುಖ. ಇದರ ಪರಿಚಯವಿರುವ ಹೂವಯ್ಯ ವರ್ಷದಲ್ಲಿ ಕೆಲವು ದಿನಗಳನ್ನಾದರು ಅಲ್ಲಿ ಕಳೆಯುತ್ತಿದ್ದ. ಗೌರಮ್ಮ ಆ ಕಾಲದಲ್ಲಿಯೇ ಮಕ್ಕಳನ್ನು ಗೆಳೆಯರ ರೀತಿ ನೋಡುವುದನ್ನು ಕಲಿತಿದ್ದರು. ಇದಕ್ಕೆ ಸಾಕ್ಷಿ ಎಂಬಂತೆ ಮಗಳ ಮನಸ್ಸಿನಲ್ಲಿರುವ ಪ್ರತಿ ವಿಚಾರವನ್ನು ಅವರು ಗ್ರಹಿಸುತ್ತಿದ್ದರು. ಮಾತೃ ಸ್ವರೂಪಿಣಿಯಾದ ಅವರು ತಮ್ಮ ಗೃಹಕೃತ್ಯದ ನಡುವೆಯೂ ಮಕ್ಕಳನ್ನು ಸೊಗಸಾಗಿಯೇ ಬೆಳೆಸಿದ್ದರು. ಮಗಳ ಮೇಲೆ ವಿವಾಹಕ್ಕೆ ಒತ್ತಾಯ ಮಾಡದೇ ಆ ಗಂಡು ಇಷ್ಟವಾಗದಿದ್ದರೆ ಬೇರೆ ನೋಡಿದರಾಯಿತು ಎಂಬಂತೆ ಭರವಸೆ ನೀಡುತ್ತಾರೆ.

ಗೌರಮ್ಮನವರು ಗ್ರಾಮೀಣ ಜೀವನ ನಡೆಸುತ್ತಿದ್ದರು. ಒಬ್ಬ ಪರಿಪೂರ್ಣವಾದ ತಾಯಿಯಂತೆಯೆ ಕಂಡು ಬರುತ್ತಾರೆ. ತಮ್ಮ ಮಕ್ಕಳ ಪ್ರತಿಯೊಂದು ಹೆಜ್ಜೆಯನ್ನು ತಮ್ಮ ನೂರಾರು ಕೆಲಸದ ಒತ್ತಡಗಳ ನಡುವೆಯು ಗಮನಿಸುತ್ತಾರೆ. ಇದಕ್ಕೆ ಹಲವು ಸಂದರ್ಭಗಳಲ್ಲಿ ಕಾದಂಬರಿಕಾರರು ಉದಾಹರಣೆ ನೀಡುತ್ತಾರೆ. ಒಂದೊಮ್ಮೆ ಹೂವಯ್ಯ ಮನೆಗೆ ಬರುತ್ತಾನೆ ಎಂದು ತಿಳಿದಾಗ ಸೀತೆ ತನ್ನ ಕೋಣೆಯಲ್ಲಿ ಬಾಗಿಲನ್ನು ಹಾಕಿಕೊಂಡು ಶೃಂಗಾರ ಮಾಡಿಕೊಳ್ಳುತ್ತಿರುವಾಗ ಲಕ್ಷ್ಮೀ ಬಾಗಿಲು ತೆರೆಯಲು ಹೇಳಿದರು ತೆಗೆಯದೆ ಇದ್ದುದ್ದನ್ನು ಗಮನಿಸುವ ಗೌರಮ್ಮ ಅವಳ ಮನಃಸ್ಥಿತಿಯನ್ನು ಚೆನ್ನಾಗಿಯೇ ಅರ್ಥಮಾಡಿಕೊಂಡು ನಗುತ್ತಾರೆ. ಕೃಷ್ಣಪ್ಪನ ವಿವಾಹ ನಿಶ್ಚಯವಾಗುತ್ತದೆಂದು ಸೀತೆ ಕನಸ್ಸು ಕಂಡು ಭಯಭೀತಳಾಗಿ ಕೂಗಿಕೊಂಡಾಗಲು ಗೌರಮ್ಮ ಮಗಳ ಮನಸ್ಸನ್ನು ಅರಿತು ಸಂತೈಸುತ್ತಾರೆ. ಇಷ್ಟೆಲ್ಲಾ ತಿಳಿದಿದ್ದರು ಮಗಳ ಪರವಾಗಿ ನಿಂತು ಗಂಡನಿಗೆ ತಿಳಿಹೇಳುವ ಪ್ರಯತ್ನವನ್ನು ಮಾಡುವುದೇ ಇಲ್ಲ. ಬಹುಶಃ

ಪುರುಷ ಪ್ರಧಾನವಾದ ಸಮಾಜವನ್ನು ಬಿಂಬಿಸುವ ಉದ್ದೇಶ ಇದ್ದರು ಇರಬಹುದು. ಆದರೆ ಇಲ್ಲಿ ಗೌರಮ್ಮ ಮಗಳ ಪರ ನಿಲ್ಲಲು ಆಗದೆ ಗಂಡನ ಪರ ವಹಿಸಿಕೊಳ್ಳಲು ಆಗದೆ ಇಬ್ಬದಿಯನ್ನು ಅನುಭವಿಸುತ್ತಾರೆ.

ಮಗಳಿಗೆ ಆರೋಗ್ಯ ಹದಗೆಟ್ಟ ಸಂದರ್ಭ ಗೌರಮ್ಮರ ಪರಿಸ್ಥಿತಿಯು ಶೋಚನೀಯವಾಗಿಯೇ ಇರುತ್ತದೆ. ಅದನ್ನು ಕಾದಂಬರಿಕಾರರು ಈ ರೀತಿ ಬರೆಯುತ್ತಾರೆ. "ಮಗಳ ಶೋಚನೀಯ ಸ್ಥಿತಿಯನ್ನು ಕಂಡ ತಾಯಿಯ ಮನದಲ್ಲಿ ಮರುಕವು, ಭಯವು ಮೂಡಿದ್ದವು, ಇನ್ನೇನು ಕೆಲವೇ ದಿನಗಳಲ್ಲಿ ಮದುವೆಯಾಗಿ ಸಂಸಾರದ ಸುಖ ಸಂತೋಷಗಳನ್ನುಅನುಭವಿಸುತ್ತಾಳೆ ಎಂದು ಹಾರೈಸಿದ ತಮ್ಮ ನೆಚ್ಚಿನ ಕುವರಿಗೆ ಏನು ಅಮಂಗಳ ಒದಗುವುದೋ ಎಂದು ಗೌರಮ್ಮನವರಿಗೆ ಶಂಕೆ ಕಾಡುತ್ತದೆ. ಪ್ರತಿ ಸಾರಿಯೂ ಗೌರಮ್ಮ ತಾಯಿಯ ಮಮಕಾರ, ಕರುಣೆ, ವಾತ್ಸಲ್ಯ ಭರಿತ ಧ್ವನಿಯಲ್ಲಿ ಪದೆ ಪದೆ ಮಗಳ ಕೆನ್ನೆಯನ್ನು ಸವರಿ, ಕೆದರಿದ್ದ ಕೂದಲನ್ನು ನೀವಿ ಸರಿಮಾಡುತ್ತ "ಈಗ ಹ್ಯಾಂಗದೆ" ಎಂದು ಪ್ರಶ್ನಿಸುತ್ತಿರುತ್ತಾರೆ. ಮಕ್ಕಳನ್ನು ಕಂಡರೆ ಅಷ್ಟೊಂದು ಪ್ರೀತಿ ಅವರಿಗೆ ಒಂದೊಮ್ಮೆ ಪೆಟ್ಟು ಕೊಟ್ಟರು ಕ್ಷಣ ಮಾತ್ರದಲ್ಲಿ ಅವರೇ ಅಳುತ್ತಿದ್ದರು. ಒಟ್ಟಾರೆ ಒಬ್ಬಳು ಪರಿಪೂರ್ಣ ತಾಯಿಯಾಗಿ ಅವರು ಕಂಡು ಬರುತ್ತಾರೆ.

## ಸೀತೆ

ಸೀತೆ, ಈ ಕಾದಂಬರಿಯ ಎರಡನೇ ಕಥಾನಾಯಕಿ. ಮುತ್ತಳ್ಳಿ ಶಾಮೇಗೌಡ ಮತ್ತು ಗೌರಮ್ಮರ ಮಗಳು. ಈಕೆಯ ಆರಾಧ್ಯಮೂರ್ತಿ ಹೂವಯ್ಯ. ಹೂವಯ್ಯನಿಗೂ ಸೀತೆ ಎಂದರೆ ವಿಶೇಷವಾದ ಅಕ್ಕರೆ. ಸೀತೆ ಕಾದಂಬರಿಯ ಪ್ರಾರಂಭದಲ್ಲಿ ಮುಗ್ದೆಯಾಗಿ ಚಿತ್ರಿಸಲ್ಪಟ್ಟಿದ್ದರು, ಒಂದು ಹಂತದಲ್ಲಿ ಧೈರ್ಯಶಾಲಿ, ಮೊಂಡು ಸ್ವಭಾವದವಳಾಗಿಯೂ ಕಾಣಿಸಿಕೊಳ್ಳುತ್ತಾಳೆ. ಆದರೂ ಆಕೆಗೆ ತನ್ನ ಕುಟುಂಬ ಮತ್ತು ಸುತ್ತಲಿನ ಸಮಾಜವನ್ನು ಎದುರಿಸುವ ಚೈತನ್ಯ ಮಾತ್ರ ಇಲ್ಲ. ಮಲೆಗಳಲ್ಲಿ ಮದುಮಗಳು ಕಾದಂಬರಿಯ ನಾಯಕಿಯಾದ ಚಿನ್ನಮ್ಮಳಷ್ಟು ಧೈರ್ಯಶಾಲಿಯಾಗಿಲ್ಲದೇ ಇರುವುದು ಆಕೆಯ ಹೀನ ಪರಿಸ್ಥಿತಿಗೆ ಕಾರಣ. ಈ ಸನ್ನಿವೇಶದಿಂದ ಪಾರಾಗಲು ಆಕೆ ಕಂಡುಕೊಂಡ ಉಪಾಯ ಮೂರ್ಚೆ ರೋಗ. ಈ ಮೂಲಕ ತನಗೆ ಎದುರಾಗುವ ಸಮಸ್ಯೆಯನ್ನು ಎದುರಿಸುವುದನ್ನು ಬಿಟ್ಟು ಪಲಾಯನ ಹಾದಿ ಹಿಡಿಯುತ್ತಾಳೆ.

ಪ್ರಾರಂಭದಲ್ಲಿ ಸೀತೆ ಎಲ್ಲಾ ಸಂಪ್ರದಾಯಸ್ಥ ಕುಟುಂಬದ ಹೆಣ್ಣು ಮಕ್ಕಳಂತೆ ಕಂಡು ಬರುತ್ತಾಳೆ. ಅವಳಿಗೂ ಸ್ತ್ರೀ ಸಹಜವಾದ ನಾಚಿಕೆ ಇರುವುದು ತೋರುತ್ತದೆ. ತನ್ನ ಅಣ್ಣನೊಂದಿಗೆ ಆಕೆಯ ಸಂಭಾಷಣೆಯಲ್ಲಿ ತನ್ನ ಜೀವನದ ಹೊಂಗನಸು ಕಾಣುತ್ತದೆ. ಸೀತೆ ಹೂವಯ್ಯನನ್ನು ಮದುವೆಯಾಗಬೇಕೆಂದು ಪ್ರಾರಂಭದಿಂದಲೂ ಕನಸು ಕಾಣುತ್ತಿರುತ್ತಾಳೆ. ಅದಕ್ಕೆ ಪೂರಕವಾದ ಸನ್ನಿವೇಶವು ಸೃಷ್ಠಿಯಾಗಿರುತ್ತದೆ. ಆದ್ದರಿಂದ ತನ್ನ ತಾಯಿಯ ಮತ್ತು ಅಣ್ಣನ ಬೆಂಬಲ ತನಗಿದೆ ಎಂದು ತಿಳಿದು ಮುಂದುವರೆಯುತ್ತಾಳೆ. ಆದರೆ ಆ ಕುಟುಂಬದಲ್ಲಿ ತಂದೆಯ ನಿರ್ಧಾರವೆ

ಅಂತಿಮ ಎಂದಾದಾಗ ಸೀತೆಯ ಕನಸಿನ ಗೋಪುರ ಕಳಚಿ ಬೀಳುತ್ತದೆ. ಮನೋ ರೋಗಕ್ಕೆ ತುತ್ತಾಗುತ್ತಾಳೆ.

ಸೀತೆ ತೆರಳೆಯಾಗಿದ್ದರು ಸಹ ತನ್ನ ಜವಬ್ದಾರಿಯನ್ನು ಸರಿಯಾಗಿಯೇ ನಿರ್ವಹಿಸುತ್ತಿದ್ದಳು. ಮನೆಯಲ್ಲಿ ತಂದೆ ತಾಯಿಯರ ಸೇವೆಗೆ ಸದಾ ತಯಾರಾಗಿರುತ್ತಿದ್ದಳು. ತಂದೆಯ ಪೂಜೆ ಪುನಸ್ಕಾರಗಳಿಗೆ ಬೇಕಾದ ತಯಾರಿಯನ್ನು ಮಡಿಯಿಂದಿದ್ದು ಮಾಡುತ್ತಿದ್ದಳು. ತಾರುಣ್ಯದಲ್ಲಿ ತಮಗೆ ಪ್ರೀತಿ ಪಾತ್ರರಾದವರು ತಮ್ಮಲ್ಲಿಗೆ ಬರುತ್ತೇವೆ ಎಂದು ಹೇಳಿದಾಗ ಯಾವುದೇ ಹುಡುಗಿ ಅಥವಾ ಹುಡುಗ ಅಗತ್ಯಕ್ಕಿಂತ ಹೆಚ್ಚು ಶೃಂಗಾರ ಮಾಡಿಕೊಳ್ಳುವುದು, ಮಾಮೂಲಿಗಿಂತ ಹೆಚ್ಚು ಧೈರ್ಯ ತೋರಿಸುವುದು, ಪದೇ ಪದೇ ಸಮಯ ನೋಡಿಕೊಳ್ಳುವುದು, ಯಾವುದರಲ್ಲೂ ತೊಡಗಿಸಿಕೊಳ್ಳದಿರುವುದು ಇವೆಲ್ಲವು ವಯೋ ಸಹಜವಾದ ಮನೋಧರ್ಮ. ಇದಕ್ಕೆ ಸೀತೆ ಕೂಡ ಹೊರತಾಗಿರಲಿಲ್ಲ. ಹೂವಯ್ಯ ಮನೆಗೆ ಬರುತ್ತೇನೆ ಎಂದಾಗ ಇವಳ ಪರಿಸ್ಥಿತಿಯೂ ಅದೇ ಆಗಿತ್ತು. ಅದನ್ನು ಕಂಡ ಗೌರಮ್ಮನವರಿಗೂ ತಮ್ಮ ಯೌವ್ವನದ ದಿನಗಳು ನೆನಪಿಗೆ ಬರದಿರಲಿಲ್ಲ. ಈ ಒಂದು ಕ್ರಿಯೆಯನ್ನು ಗಮನಿಸಿದಾಗ ಇಂತಹ ಸನ್ನಿವೇಶ ಎಲ್ಲಾ ಕಾಲದಲ್ಲೂ, ಎಲ್ಲಾ ಪೀಳಿಗೆಯಲ್ಲೂ ಕಂಡು ಬರುವುದು ಸಹಜ ಎನಿಸುತ್ತದೆ.

ಸೀತೆಯ ಮತ್ತೊಂದು ವಿಶೇಷ ಗುಣ ಎಂದರೆ ಅರ್ಪಣಾ ಮನೋಭಾವನೆ. ತನ್ನ ಹೃದಯವನ್ನು ಹೂವಯ್ಯನಿಗೆ ಅರ್ಪಿಸಿರುವ ಇವಳು ಅವನ ಎಲ್ಲಾ ಕೆಲಸವನ್ನು ಮಾಡಲು ಸಿದ್ಧವಿರುವವಳಂತೆ ಕೆಲಸ ಮಾಡುತ್ತಾಳೆ. ಹೂವಯ್ಯನಿಗೆ ಬೆನ್ನು ನೋವಾದಾಗ, ಒಬ್ಬ ನುರಿತ ಸೇವಕಿಯ ಹಾಗೆ ಕಾರ್ಯ ನಿರ್ವಹಿಸುತ್ತಾಳೆ. ಅವನ ಎಲ್ಲಾ ಬೇಕು ಬೇಡಗಳನ್ನು ಕಣ್ಣಿನಲ್ಲಿಯೇ ಅರಿತು ಮಾಡುತ್ತಾಳೆ. ಹೂವಯ್ಯ ಅವಳ ಮನೆಯಿಂದ ಹೊರಟು ಹೋದಾಗ ಸೀತೆಗೆ ತನ್ನ ಜೀವನವನ್ನು ತುಂಬಿ ತುಳುಕಾಡುತ್ತಿದ್ದ ಆನಂದ ಇದ್ದಕ್ಕಿದ್ದಂತೆ ಮಾಯಾವಾದಂತಾಯಿತು. ಹೂವಯ್ಯನ ಸಾನಿಧ್ಯದಿಂದ ಸೀತೆಯಲ್ಲಿ ಅಪಾರವಾದ ಬದಲಾವಣೆ ಆಗುತ್ತದೆ. ಅದನ್ನು ಕಾದಂಬರಿಕಾರರು ಈ ರೀತಿ ವಿವರಿಸುತ್ತಾರೆ.

> "ಕೆಲವು ದಿನಗಳ ಹಿಂದೆ ಬರಿಯ ಹಳ್ಳಿಯ ಹುಡುಗಿಯಾಗಿದ್ದವಳು ಇಂದು ಸುಸಂಸ್ಕೃತ ತರಳೆಯಾಗಿದ್ದಾಳೆ. ಸ್ಪರ್ಶ ಮಣಿಯಿಂದ ಕಬ್ಬಿಣ ಚಿನ್ನವಾಗುತ್ತದಂತೆ. ಹೂವಯ್ಯನ ಸಾನಿಧ್ಯದ ಪ್ರಭಾವದಿಂದ ಆಕೆಯಲ್ಲಿದ್ದ ಗ್ರಾಮ್ಯ ಜೀವನಕ್ಕೆ ಸಹಜವಾಗಿದ್ದ ಹಲ ಕೆಲವು ಸ್ಥೂಲಾಂಶಗಳು, ಸೂಕ್ಷ್ಮವು, ಶುಭ್ರವೂ ಆಗಿದ್ದವು. ಉತ್ತಮ ಆಲೋಚನೆಗಳು ಆಕೆಯ ಮನೋರಂಗದಲ್ಲಿ ಮೊಳೆತು ನಳನಳಿಸಲು ಪ್ರಾರಂಭವಾಗಿದ್ದವು. ಆಕೆಯ ಹೃದಯದಲ್ಲಿ ಉತ್ತಮ ತರ ಭಾವನೆಗಳು, ಹೊಸ ಮಳೆಯ ನೀರು ಬಂದು ಹೊಳೆಯ ತೆರೆಗಳಂತೆ ಜಾಗರಿತವಾಗಿದ್ದವು" ಎಂದಿದ್ದಾರೆ (ಕಾನೂರು ಹೆಗ್ಗಡತಿ ಪುಟ ಸಂಖ್ಯೆ 228)

ಹೂವಯ್ಯನೇ ತನ್ನ ಗಂಡ ಎಂದು ತಿಳಿದ ಸೀತೆಯ ಜೀವನದಲ್ಲಿ ಆತನನ್ನು ಬಿಟ್ಟು ಇನ್ನಿಬ್ಬರು ಪುರುಷರ ಪ್ರವೇಶದ ಮಾತುಕತೆಯಾಗುತ್ತದೆ. ಎಲ್ಲಾವು ಅವಳ ಇಷ್ಟಕ್ಕೆ ವಿರುದ್ಧವಾಗಿಯೇ ನಡೆಯುವುದರಿಂದ ಮನೆಯವರಲ್ಲಿ ಹೇಳಿಕೊಳ್ಳಲಾಗದ ಸಂಕಟ, ಹೂವಯ್ಯನನ್ನು ಸಂದಿಸಲಾಗದ ನೋವು. ಮದುವೆಯಾಗಲಾರದ ವೇದನೆ ಇವೆಲ್ಲವು ಒಟ್ಟಾಗಿ ಸೀತೆಯನ್ನು ಮಾನಸಿಕ ರೋಗಿಯನ್ನಾಗಿ ಮಾಡುತ್ತದೆ. ಈ ಜಂಜಾಟದಿಂದ ಹೊರ ಬರಬೇಕಾದರೆ ಅವಳ ಮನಸ್ಸು ಮೂರ್ಛೆ ರೋಗದ ಮೊರೆ ಹೋಗುತ್ತದೆ. ದುರಾದೃಷ್ಟವಶಾತ್ ಅವಳೊಂದಿಗೆ ಮದುವೆ ನಿಶ್ಚಿತವಾದ ಇಬ್ಬರು ಬೇರೆ ಬೇರೆ ಕಾರಣಗಳಿಂದ ಮರಣ ಹೊಂದುತ್ತಾರೆ. ಅಂತಿಮವಾಗಿ ಸೀತೆ ವಿವಾಹವಾಗದೆ ವೈರಾಗಿಯಂತೆ ಹೂವಯ್ಯನೊಂದಿಗೆ ಜೀವನ ಕಳೆಯಬೇಕಾದ ವಿಚಿತ್ರ ಸನ್ನಿವೇಶಕ್ಕೆ ಸಾಕ್ಷಿಯಾಗುತ್ತಾಳೆ.

ಒಟ್ಟಾರೆ ಸೀತೆ ಸೂಕ್ಷ್ಮ ಹೃದಯದ ಸ್ತ್ರೀ ಪ್ರೀತಿ, ವಾತ್ಸಲ್ಯ, ಮಮಕಾರ, ಗೌರವ ತುಂಬಿಕೊಂಡಿದ್ದ ಸಂಪ್ರದಾಯಸ್ಥ ಹೆಣ್ಣು ಎಲ್ಲೂ ಕೂಡ ತನ್ನ ತಂದೆ ತಾಯಿಯ ಅಭಿಪ್ರಾಯಗಳಿಗೆ ಚ್ಯುತಿ ಬಾರದಂತೆ, ಅವರ ಮನಸ್ಸಿಗೆ ನೋವಾಗದಂತೆ, ಅವರಿಗೆ ಅವಮಾನವಾಗದಂತೆ, ತನ್ನ ನೋವು ಸಂಕಟಗಳನ್ನು ತಾನೇ ಅನುಭವಿಸಿ, ಸುಖ ಪಡದೆ ಜೀವಿಸುವ ಪಾತ್ರವಾಗುತ್ತಾಳೆ.

## ಪುಟ್ಟಮ್ಮ

ಪುಟ್ಟಮ್ಮ, ಚಂದ್ರಯ್ಯ ಗೌಡರ ಎರಡನೆಯ ಹೆಂಡತಿಯ ಮಗಳು. ಈ ಕಾದಂಬರಿಯಲ್ಲಿ ಬರುವ ಒಂದು ಪುಟ್ಟ ಪಾತ್ರ. ಈಕೆ ವಾಸ್ತವವಾಗಿ ಶ್ರೀಮಂತ ಅವಿಭಕ್ತ ಕುಟುಂಬದ ಸುಸಂಸ್ಕೃತ ಮನೆಯಲ್ಲಿ ಬೆಳೆದವಳು. ಆಕೆಯ ದುರಾದೃಷ್ಟವು ಎಂಬಂತೆ ತನ್ನ ತಾಯಿಯನ್ನು ಬಾಲ್ಯದಲ್ಲಿಯೇ ಕಳೆದುಕೊಳ್ಳುತ್ತಾಳೆ. ತಾಯಿಯ ಪ್ರೀತಿ, ವಾತ್ಸಲ್ಯ ಯಾವುದು ಪುಟ್ಟಮ್ಮನಿಗೆ ಪೂರ್ಣ ಪ್ರಮಾಣದಲ್ಲಿ ದೊರೆಯುವುದಿಲ್ಲ. ತಂದೆಯ ದರ್ಪ, ಸಿಡುಕುತನಗಳ ನಡುವೆ ಅವಳಿಗೆ ಅಮೃತ ಸಿಂಚನದಂತೆ ನಾಗಮ್ಮನವರ ಆರೈಕೆ ದೊರೆಯುತ್ತದೆ. ಪುಟ್ಟಮ್ಮಳದು ತಂದೆಯಂತೆಯೆ ಮುಂಗೋಪದ ಬುದ್ದಿ. ತನ್ನ ತಮ್ಮ ವಾಸುವಿಗೆ ಮಲತಾಯಿಯಿಂದ ತೊಂದರೆಯಾದಗ ಆಕೆ ಪ್ರತಿಭಟಿಸುವ ರೀತಿ ಆಶ್ಚರ್ಯವನ್ನುಂಟುಮಾಡುತ್ತದೆ. ಅವಳ ವ್ಯಕ್ತಿತ್ವವನ್ನು ಕಾದಂಬರಿಕಾರರು ಈ ರೀತಿ ಉಲ್ಲೇಖಿಸುತ್ತಾರೆ. “ಸುಬ್ಬಮ್ಮ ಪುಟ್ಟಮ್ಮಗಳಿಗಿಂತಲೂ ಬಲಿಷ್ಠೆಯಾಗಿದ್ದಳು, ಶ್ರೀಮಂತ ಕನ್ಯೆಯ ವ್ಯಕ್ತಿತ್ವಕ್ಕೆ ಅಳುಕಿ ಗೊಣಗುತ್ತ ಹಿಂದಕ್ಕೆ ಹೋದಳು” ಎಂಬ ವಾಖ್ಯ ಅವಳ ವ್ಯಕ್ತಿತ್ವಕ್ಕೆ ಹಿಡಿದ ಕೈ ಕನ್ನಡಿಯಾಗಿದೆ.

ಪುಟ್ಟಮ್ಮಳು ಕುಟುಂಬದ ಸಹಜವಾದ ದಾನದ ಬುದ್ದಿಯನ್ನು ಹೊಂದಿರುತ್ತಾಳೆ. ಇದೇ ಗುಣ ಹಲವು ಸಾರಿ ಮನೆಯ ರಾದ್ಧಾಂತಕ್ಕೆ ಕಾರಣವಾಗುತ್ತಿತ್ತು. ಇಷ್ಟೇ ಅಲ್ಲದೇ ಆಕೆಯದು ಚಾಣಕ್ಷ ಬುದ್ದಿ. ಮನೆ ಪಾಲಾಗುತ್ತದೆ ಎಂದು ತಿಳಿದಾಗ ಬೇರೆ ಸದಸ್ಯರಂತೆ ಈಕೆಯು ತನ್ನ ಪಾಲಿನ ಒಡವೆ, ವಸ್ತ್ರ, ವಸ್ತುಗಳನ್ನು ತಮ್ಮ ವಾಸುವಿನೊಡನೆ ಜೋಪಾನ ಮಾಡಿಕೊಳ್ಳುತ್ತಾಳೆ.

ಇದರಿಂದ ಮದುವೆಯಾಗಿ ಬೇರೆ ಮನೆಗೆ ಹೋಗ ಬೇಕಾದ ಹೆಣ್ಣು ಮಗಳು ಕೂಡ ಆಸ್ತಿ ಮಾಡಿಕೊಳ್ಳುವ ಮನೋಭಾವನೆ ಹೊಂದಿರುತ್ತಾರೆ ಎಂಬುದು ಸ್ಪಷ್ಟವಾಗುತ್ತದೆ.

ಮನೆ ಪಾಲಾದರು ಮನಸ್ಸು ಪಾಲಾಗದೆ ಇರುವುದು ಪುಟ್ಟಮ್ಮಳ ವಿಶೇಷ. ನಾಗಮ್ಮನವರ ಮನೆ ಬೇರೆಯಾದರೂ, ತಂದೆಯ ಕಣ್ಣು ತಪ್ಪಿಸಿ ಅವರೊಂದಿಗೆ ಮಾತುಕತೆ, ಊಟೋಪಚಾರ ನಡೆದೇ ಇರುತ್ತದೆ. ಮದುಮಗಳಾದರು ಕೂಡ ಮನೆಯವರಿಗೆ ತಿಳಿಸದೆಯೇ ಹೂವಯ್ಯನ ಮನೆಗೆ ಬಂದು ನಾಗಮ್ಮನವರ ಆಶಿರ್ವಾದ ಪಡೆದು ಹೋಗುವುದು ಅವಳ ಸಂಪ್ರದಾಯಸ್ಥ ಮನೋಭಾವನೆಗೆ ಉದಾಹಾರಣೆ. ಒಟ್ಟಾರೆ ಕಾದಂಬರಿಯ ಉದ್ದಕ್ಕೂ ಅಲ್ಲೊಮ್ಮೆ ಇಲ್ಲೊಮ್ಮೆ ಬಂದು ಹೋಗುವ ಪಾತ್ರ ಪುಟ್ಟಮ್ಮಳದ್ದು. ಈ ಪಾತ್ರವನ್ನು ಶ್ರೀಮಂತ ಮನೆತನದ ಹೆಣ್ಣು, ಒಳ್ಳೆಯ ಗುಣ, ನಡತೆ ಉಳ್ಳವಳು, ಸುಸಂಸ್ಕೃತಳು ಎಂಬಂತೆ ಚಿತ್ರಿಸಿದ್ದಾರೆ. ಇಲ್ಲಿ ಆರ್ಥಿಕ, ಸಾಮಾಜಿಕ, ಸಾಂಸ್ಕೃತಿಕ ಮಹತ್ವವನ್ನು ನೀಡಿಲ್ಲ.

## ಗಂಗೆ

ಗಂಗೆ ಎಂಬ ಈ ಪಾತ್ರ ಕಾದಂಬರಿಯಲ್ಲಿ ಪ್ರಮುಖ ಸ್ತ್ರೀ ಪಾತ್ರ. ಈಕೆ ಸೇರೆಗಾರ ರಂಗಪ್ಪ ಸೆಟ್ಟಿ ಘಟ್ಟದ ಕೆಳಗಿನಿಂದ ಕರೆದುಕೊಂಡು ಬಂದ ಹೆಣ್ಣಾಳು ಹಾಗು ಈಕೆ ಸೇರೆಗಾರನ ಪ್ರೇಯಸಿ ಕೂಡ. ಆದರೆ ಆತನಿಗೆ ಮಾತ್ರ ಅವಳು ಮೀಸಲಲ್ಲ. ಅವಳು ಚಂದ್ರೇಗೌಡ ಹಾಗೂ ಓಬಯ್ಯಗೌಡನನ್ನು ವಶಮಾಡಿಕೊಂಡವಳು. ಸುಬ್ಬಮ್ಮಳನ್ನು ಚಂದ್ರಯ್ಯ ಗೌಡರು ವಿವಾಹವಾದ ಮೇಲೆ ತನ್ನನ್ನು ಕಡೆಗಣಿಸುತ್ತಿದ್ದಾರೆಂದು ಅವಳ ಮೇಲು ಅಸೂಯೆಪಟ್ಟು ವೈರತ್ವ ಸಾಧಿಸುತ್ತಾಳೆ. ವಾಸ್ತವವಾಗಿ ಗಂಗೆ ದಕ್ಷಿಣ ಕನ್ನಡದಲ್ಲಿ ಶ್ರೀಮಂತ ವಯಸ್ಕ ವ್ಯಕ್ತಿಯೊಡನೆ ನಾಲ್ಕನೇ ಮದುವೆಯಾಗಿದ್ದಾಳು. ಅಲ್ಲೂ ಸರಿ ಬರದೆ ಮತ್ತೊಬ್ಬನೊಡನೆ ಸಂಬಂಧ ಹೊಂದಿ ಅದು ಅವಳ ಗಂಡನಿಗೆ ತಿಳಿದು ಆತ ಕೊಲೆ ಮಾಡಿ ಜೈಲು ಸೇರುತ್ತಾನೆ. ಮನೆಯವರು ಈಕೆಯನ್ನು ಹೊರ ಹಾಕುತ್ತಾರೆ. ಆಗ ಸಹಾಯಕ್ಕೆ ಬಂದನೇ ರಂಗಪ್ಪ ಸೆಟ್ಟಿ. ಆತನೊಂದಿಗೆ ಘಟ್ಟದ ಮೇಲೆ ಬಂದು ಕಾನೂರಿನಲ್ಲಿ ಕೆಲಸಕ್ಕೆ ನಿಲ್ಲುತ್ತಾಳೆ.

ಹೀಗೆ ಗಂಗೆಯ ಜೀವನದಲ್ಲಿ ಹಲವು ಪುರುಷರು ಬಂದು ಹೋಗುತ್ತಾರೆ. ಅವರೆಲ್ಲರಿಂದ ಆಕೆ ಮುಖ್ಯವಾಗಿ ಬಯಸಿದ್ದು ಲೈಂಗಿಕ ತೃಪ್ತಿಯನ್ನು ಮಾತ್ರ. ಕಾಮಾಂಧೆಯಾದ ಗಂಗೆ ಕೇವಲ ದೇಹದ ತಣಿಸುವಿಕೆಗೆ ಮಾತ್ರ ಗಮನ ಕೊಡುತ್ತಾಳೆ. ಆದರೆ ಸಮಾಜದಲ್ಲಿ ಗರತಿಯರು ಗುರುತಿಸಿಕೊಳ್ಳುವುದು ಗಂಗೆಯಂತಹ ವೇಶ್ಯೆಯರಿದ್ದಾಗ ಮಾತ್ರ ಎಂಬುದು ಸ್ಪಷ್ಟ. ಸಮಾಜದ ಸ್ವಾಸ್ಥ್ಯ ಕಾಪಾಡುವಲ್ಲಿಯೂ ಇವರು ಪ್ರಮುಖ ಪಾತ್ರ ವಹಿಸುತ್ತಾರೆ. ಲೈಂಗಿಕ ತೃಪ್ತಿ ಹೊಂದದ ಪುರುಷರಿಗೆ ಇಂತಹವರು ಆಸರೆಯಾಗಿ ನಿಲ್ಲುತ್ತಾರೆ. ಇದರಿಂದಾಗಿ ಸಮಾಜದಲ್ಲಿ ಅತ್ಯಚಾರ, ಅನಾಚಾರಗಳು ಕಡಿಮೆಯಾಗುತ್ತದೆ. ಕಾದಂಬರಿಕಾರರಿಗೂ ಗಂಗೆ ಭಿನ್ನವಾಗಿಯೇ ಕಾಣುತ್ತಾಳೆ. ಅವರ ಪ್ರಕಾರ,

"ಸುಬ್ಬಮ್ಮನಿಗೆ ಗಂಗೆ ತಾನು ಕಂಡ ಇತರ ಸ್ತ್ರೀಯರಿಗಿಂತಲೂ ಸ್ವಲ್ಪ ಭಿನ್ನವಾಗಿ ತೋರಿದಳು. ಅದಕ್ಕೆ ಕಾರಣ ಆಕೆಗೆ ಹೊಳೆದಿಲ್ಲ. ಗಂಗೆ ಗಂಡಸರೊಂದಿಗೆ ಸ್ತ್ರೀ ಸಹಜವಾದ ಭಿರುತ್ವ, ಲಜ್ಜೆಗಳನ್ನುಳೀದು ಹೆಚ್ಚು ಸ್ವಾತಂತ್ರ್ಯದಿಂದ ವರ್ತಿಸುವಳು. ಮಾತುಕತೆಯಲ್ಲಿಯೂ, ಆಚಾರ ವ್ಯವಹಾರದಲ್ಲಿಯೂ ಅವಳು ಏನೋ ಒಂದು ತೆರೆನಾದ ಬೆಡಗಿನಿಂದಲೂ, ವೈಯ್ಯಾರದಿಂದಲೂ ನಡೆಯುವಳು. ಗಂಡಸರು ಕೂಡ ಅವಳೊಡನೆ ಇತರ ಹೆಂಗಸರೊಡನೆ ನಡೆದಂತೆ ನಡೆದುಕೊಳ್ಳದೆ ಹೆಚ್ಚು ಸಲಿಗೆಯಿಂದಲೂ, ನಾಣಿಲ್ಲದೆಯೂ ವ್ಯವಹರಿಸುವರು. ಇದನ್ನೆಲ್ಲ ನೋಡಿ ಸುಬ್ಬಮ್ಮನಿಗೆ ಗಂಗೆಯ ಪರವಾಗಿ ಪ್ರಶಂಸೆಯುಂಟಾಗಿ ಅವಳೊಡನೆ ಇತರ ಯಾರಿಗೂ ಹೇಳದ ಸುಖ, ದುಃಖಗಳನ್ನು ಹೇಳಿಕೊಳ್ಳುವಳು, ಕಷ್ಟ ಸಂಕಟಗಳಲ್ಲಿ ಬುದ್ಧಿ ಹೇಳುವಳು" (ಕಾನೂರು ಹೆಗ್ಗಡತಿ ಪುಟ ಸಂಖ್ಯೆ 164)

ಗಂಗೆ ಗ್ರಾಮ ವಾಸಿಯಾದರು ವ್ಯವಹಾರ ಚತುರಳು. ಪ್ರತಿಯೊಂದು ವಿಷಯವನ್ನು ವ್ಯವಹಾರಿಕ ದೃಷ್ಟಿಕೋನದಲ್ಲಿಯೇ ನೋಡುವವಳು. ಸುಬ್ಬಮ್ಮಳಿಂದಾಗಿ, ಚಂದ್ರೇಗೌಡರ ಸಂಪರ್ಕ ತಪ್ಪಿ ಹೋಗುವುದನ್ನು ಆಕೆ ಗಂಭೀರವಾಗಿಯೇ ಪರಿಗಣಿಸುತ್ತಾಳೆ. ಅಂತಿಮವಾಗಿ ಗಂಗೆ ತನ್ನ ವ್ಯವಹಾರ ಚಾಣಾಕ್ಷತೆಯಿಂದ ಸುಬ್ಬಮ್ಮನ ಅದೋಗತಿಗೆ ಹಾಗೂ ಮರಣಕ್ಕೆ ಪರೋಕ್ಷವಾಗಿ ಕಾರಣವಾಗುತ್ತಾಳೆ. ಸುಬ್ಬಮ್ಮಳ ಪರಿಸ್ಥಿತಿಯನ್ನು ತನ್ನ ಲಾಭಕ್ಕೆ ಬಳಸಿಕೊಂಡ ಗಂಗೆ ಅವಳನ್ನು ಗರ್ಭಪಾತ ಮಾಡಿಸಿ, ಈ ಪರಿಸ್ಥಿತಿಯಿಂದ ಮುಕ್ತಿ ದೊರಕಿಸುತ್ತೇನೆ ಎಂದು ಹೇಳಿ ಅವಳಿಂದ ಬಂಗಾರ ಮತ್ತು ವಸ್ತುಗಳೆಲ್ಲವನ್ನು ಸೆಳೆದುಕೊಂಡು ಅಂತಿಮ ಹಂತದಲ್ಲಿ ಔಷಧಿಯನ್ನು ನೀಡುತ್ತಾಳೆ. ಆದರೆ ಅದನ್ನು ಹೇಗೆ ಪ್ರಯೋಗಿಸಬೇಕೆಂದು ಹೇಳಿಕೊಡದೆ ಸುಬ್ಬಮ್ಮಳ ಸಾವಿಗೆ ಕಾರಣಳಾಗುತ್ತಾಳೆ.

ಒಟ್ಟಾರೆ ಗಂಗೆ ವ್ಯವಹಾರ ಚತುರೆ, ನಾಚಿಕೆ, ಅಂಜಿಕೆ ಯಾವುದು ಇಲ್ಲದೆ ಬಹಳ ಸೊಗಸಿನ ಜೀವನ ನಡೆಸಿದವಳಾಗಿ ಕಂಡು ಬರುತ್ತಾಳೆ.

# ಅಧ್ಯಾಯ 5

## ಸಾಮಾಜಿಕ ಆರ್ಥಿಕ ಮತ್ತು ಧಾರ್ಮಿಕ ವಿಚಾರಗಳ ಹಿನ್ನೆಲೆಯಲ್ಲಿ ಇರುವ ಭಿನ್ನತೆಗಳು

ಸಮಾಜದಲ್ಲಿ ಎರಡು ತಲೆಮಾರುಗಳು ಎಂದರೆ ತಂದೆ ಮತ್ತು ಮಗ, ತಾಯಿ ಮತ್ತು ಮಗಳು ಆಗಿರಬಹುದು. ಅಜ್ಜ ಮತ್ತು ಮೊಮ್ಮಕ್ಕಳಾಗಿರಬಹುದು. ಎರಡು ಭಿನ್ನ ಕಾಲ ಘಟ್ಟದಲ್ಲಿ ಜನಿಸಿ, ಜೀವನ ಕಟ್ಟಿಕೊಂಡವರ ಯೋಚನೆ. ದೃಷ್ಠಿಕೋನ, ಅಭಿಪ್ರಾಯ, ಕನಸು, ನನಸು ಎಲ್ಲವೂ ಭಿನ್ನ. ಅವರು ಸಾಮಾಜಿಕವಾಗಿ, ಆರ್ಥಿಕವಾಗಿ, ಧಾರ್ಮಿಕವಾಗಿ ಬೇರೆ ರೀತಿಯಲ್ಲಿಯೇ ಯೋಚಿಸುತ್ತಾರೆ. ಇದರಿಂದಾಗಿ ಹಲವು ಸಂದರ್ಭಗಳಲ್ಲಿ ಈ ಎರಡೂ ತಲೆಮಾರುಗಳ ನಡುವೆ ಸಂಘರ್ಷ, ತಿಕ್ಕಾಟ, ಕಲಹ ಪ್ರಾರಂಭವಾಗಬಹುದು. ಈ ಘಟನೆಗೆ ನಾವು ಆ ವ್ಯಕ್ತಿಗಳನ್ನು ನೇರವಾಗಿ ಹೊಣೆಗಾರರನ್ನಾಗಿ ಮಾಡುವ ಬದಲು ಅವರು ಜನಿಸಿದ, ವಾಸಿಸುತ್ತಿರುವ ಕಾಲ ಘಟ್ಟವನ್ನು ಹೊಣೆ ಮಾಡಬೇಕಾಗುತ್ತದೆ. ಸಾಮಾನ್ಯವಾಗಿ ಕಾಲ, ವ್ಯಕ್ತಿಗಳನ್ನು, ಮನಸ್ಸನ್ನು ಬದಲಾಯಿಸುತ್ತಿರುತ್ತದೆ. ಕಾಲದ ಮಹಿಮೆಯೇ ಹಾಗೆ ಯಾವುದನ್ನು ಶಾಶ್ವತವಾಗಿ ಒಂದೆ ರೀತಿ ಇರಲು ಬಿಡುವುದಿಲ್ಲ. ಅದು ಗತಿಶೀಲತೆಯನ್ನು ಹೊಂದಿರುತ್ತದೆ. ಹಾಗೆ ಮನುಷ್ಯರು ಕೂಡ. ಒಂದು ನಿರ್ದಿಷ್ಟ ವಸ್ತು ವಿಷಯದ ಬಗ್ಗೆ ಅಭಿಪ್ರಾಯ ಸದಾ ಬದಲಾಗುತ್ತಿರುತ್ತದೆ. ಹೊಸ ಪೀಳಗೆಯ ಜನರು ಬದಲಾವಣೆಯನ್ನು ಸ್ವೀಕರಿಸುವಷ್ಟು ಸುಲಭದಲ್ಲಿ ಹಳೆಯ ತಲೆಮಾರಿನವರು ಸ್ವೀಕರಿಸುವುದಿಲ್ಲ.

ಇಂತಹ ಸಂದರ್ಭದಲ್ಲಿಯೇ ಸಂಘರ್ಷಗಳು ಹುಟ್ಟಿಕೊಳ್ಳುತ್ತವೆ. ಪ್ರತಿ ಪೀಳಗೆಯವರು ತಾವು ತಿಳಿದದ್ದೆ ಸರಿ ಎಂಬ ಧೋರಣೆಯಲ್ಲಿರುತ್ತಾರೆ. ಅವರಲ್ಲಿ ನಾವೇ ಮಹಾ ಜ್ಞಾನಿಗಳೆಂಬ ಅಹಂಭಾವ ಇರುತ್ತದೆ. ಈ ಭಾವನೆಯು ಪೀಳಗೆಯಲ್ಲಿ ಅಂತರವನ್ನುಂಟು ಮಾಡುವುದು. ಪ್ರಸ್ತುತ ಕಾದಂಬರಿಯಲ್ಲಿ ಚಂದ್ರಯ್ಯಗೌಡ-ರಾಮಯ್ಯರ, ಹೂವಯ್ಯ-ವೆಂಕಪ್ಪ ಜೋಯಿಸರ ಹಾಗೂ ನಾಗಮ್ಮ ಮತ್ತು ಸುಬ್ಬಮ್ಮರ ನಡುವಿನ ವ್ಯತ್ಯಾಸಗಳನ್ನು ಈ ಹಂತದಲ್ಲಿ ವಿಶ್ಲೇಷಿಸಲಾಗುತ್ತದೆ.

## ಹೂವಯ್ಯ ಮತ್ತು ವೆಂಕಪ್ಪ ಜೋಯಿಸರ ನಡುವಿನ ಸಾಮಾಜಿಕ, ಆರ್ಥಿಕ ಮತ್ತು ಧಾರ್ಮಿಕ ವಿಚಾರಗಳ ಅಂತರ

ಹೂವಯ್ಯ ಕಾನೂರು ಚಂದ್ರಯ್ಯಗೌಡರ ಅಣ್ಣನ ಮಗ. ಅಂದರೆ ನಾಗಮ್ಮನವರ ಏಕಮಾತ್ರ ಪುತ್ರ. ಉನ್ನತ ವಿದ್ಯಾಭ್ಯಾಸಕ್ಕಾಗಿ ಮೈಸೂರು ಸೇರುತ್ತಾನೆ. ಆದರೆ ಕಾನೂರಿನ

ಬದಲಾದ ಪರಿಸ್ಥಿತಿಯಿಂದ ವಿದ್ಯಾಭ್ಯಾಸ ಪೂರ್ಣಗೊಳಸಲಾಗದೆ ಮರಳ ಊರು ಸೇರುತ್ತಾನೆ. ಆದರೆ ಅವನೊಂದಿಗೆ ಪದವಿ ಇಲ್ಲದೆ ಹೋದರು, ದೇಶ ವಿದೇಶಗಳ ಜ್ಞಾನ ಸಂಪತ್ತು ತಲೆಯಲ್ಲಿ ಹೊತ್ತು ತಂದಿರುತ್ತಾನೆ. ತನ್ನ ಸುಶಿಕ್ಷಿತ, ಅಧ್ಯಾತ್ಮಿಕ ಮತ್ತು ಕ್ರಿಯಾ ಶೀಲಾ ಮನಸ್ಸಿನಿಂದಾಗಿ ಸುತ್ತಲಿನವರ ಬದುಕನ್ನು ಹಸನುಗೊಳಸುವ ಪ್ರಯತ್ನ ಮಾಡುತ್ತಾನೆ.

ವೆಂಕಪ್ಪ ಜೋಯಿಸರು ತುಂಗಾ ನದಿ ತೀರದ ಅಗ್ರಹಾರದ ನಿವಾಸಿಗಳು ಮಲೆನಾಡಿನ ಜನರ ಮೂಢನಂಬಿಕೆ, ಮೌಢ್ಯವೇ ಇವರ ಬಂಡವಾಳ. ಕೆಲಸ ದೇವರ ಪೂಜೆಯಾದರೂ ಇದರೊಂದಿಗೆ ನಿಮಿತ್ತ ನೋಡುವುದು, ಜಾತಕ ಬರೆಯುವುದು, ಮಂತ್ರ ತಂತ್ರಗಳ ಸಹಾಯದಿಂದ ಭೂತ ಬಿಡಿಸುವುದು ಮತ್ತು ಹಿಡಿಸುವಂತಹ ಕೆಲಸ ಮಾಡಿ ಒಳ್ಳೆಯ ಆದಾಯವನ್ನು ಸಂಗ್ರಹಿಸುವವರು.

ಹೂವಯ್ಯ ಮತ್ತು ಜೋಯಿಸರು ಇಬ್ಬರದು ಬೇರೆ ಬೇರೆ ಕಾಲಘಟ್ಟ. ಆದ್ದರಿಂದ ಇವರಲ್ಲಿ ಪೀಳಗೆಯ ಅಂತರವಿದೆ. ಸಹಜವಾಗಿ ಜ್ಞಾನದಲ್ಲಿಯೂ ಇಬ್ಬರಿಗೆ ಅಜಗಜಾಂತರ ವ್ಯತ್ಯಾಸವಿದೆ. ಹೂವಯ್ಯ ಆಧುನಿಕತೆಯನ್ನು ಬಿತ್ತಿದರೆ, ಜೋಯಿಸರು ಜನರ ಮನಸ್ಸಿನಲ್ಲಿ ಮೂಢ ನಂಬಿಕೆಯನ್ನು ಬಿತ್ತಿ ಬೆಳೆಸುತ್ತಾರೆ. ಹೂವಯ್ಯನಿಗೆ ಜೋಯಿಸರ ಮೇಲೆ ವಿಶೇಷವಾದ ಸಿಟ್ಟಿದೆ. ಇದಕ್ಕೆ ಕಾರಣ ಅವನ ತಂದೆಯ ಸಾವಿಗೆ ಜೋಯಿಸರ ವಿಭೂತಿ, ಚೀಟಿಗಳೇ ಕಾರಣ ಎಂದು ತಿಳದುಕೊಂಡವನು. ಆದ್ದರಿಂದ ಅವರನ್ನು ಕಂಡರೆ ತಿರಸ್ಕಾರ ಮನೋಭಾವ ಇವರಲ್ಲಿದೆ. ಅಲ್ಲದೆ ಜೋಯಿಸರ ತಂತ್ರಗಾರಿಕೆಯಿಂದಾಗಿಯೇ ಹೂವಯ್ಯ ರಾಮಯ್ಯರ ವಿದ್ಯಾಭ್ಯಾಸ ಅರ್ಧಕ್ಕೆ ನಿಂತದ್ದು ಎಂಬ ಅನುಮಾನವು ಅವನಲ್ಲಿದೆ. ಕಾರಣ ಓದಿ ಬಂದ ಹೂವಯ್ಯ ತನ್ನ ವ್ಯವಹಾರಗಳಗೆ ಅಡ್ಡಗಾಲು ಹಾಕಬಹುದು. ಇದನ್ನು ಇಷ್ಟಪಡದ ಜೋಯಿಸರು ಚಂದ್ರಯ್ಯಗೌಡರನ್ನು ಅವರ ವಿರುದ್ಧ ಎತ್ತಿಕಟ್ಟುತ್ತಾರೆ. ಸೀತೆಯನ್ನು ಅವನಿಗೆ ಕೂಡುವುದನ್ನು ತಪ್ಪಿಸುತ್ತಾರೆ. ಆ ಮೂಲಕ ತನ್ನ ಸೇಡು ತೀರಿಸಿಕೊಳ್ಳುತ್ತಾರೆ. ಈ ಎರಡು ಪೀಳಗೆಯ ನಡುವೆ ಒಂದು ಅಂತರವನ್ನೆ ಸೃಷ್ಟಿ ಮಾಡುತ್ತದೆ. ಕಾರಣ ಇಬ್ಬರ ದೃಷ್ಟಿಕೋನ, ಯೋಚನಾ ರೀತಿ ಅವರನ್ನು ಪ್ರತ್ಯೇಕವಾಗಿ ಇರಿಸುತ್ತದೆ. ಸಾಮಾಜಿಕವಾಗಿ, ಆರ್ಥಿಕವಾಗಿ, ಧಾರ್ಮಿಕವಾಗಿ ಇವರ ದೃಷ್ಟಿಕೋನಗಳು ಪರಸ್ಪರ ವಿರುದ್ಧ ಮುಖವಾಗಿರುತ್ತದೆ.

ಕಾದಂಬರಿಯ ಕಾಲಘಟ್ಟದಲ್ಲಿ ಸಮಾಜದಲ್ಲಿ ಜಾತಿವ್ಯವಸ್ಥೆ ಪ್ರಬಲವಾಗಿತ್ತು. ಬ್ರಾಹ್ಮಣ ಜಾತಿ ಮೇಲಿನ ಸ್ಥರದಲ್ಲಿದ್ದರೆ ಕೆಳಸ್ಥರದಲ್ಲಿ ಶೂದ್ರ ಜನಾಂಗಗಳದ್ದವು. ಪ್ರತಿ ಜಾತಿಯವರು ಪ್ರತ್ಯೇಕ ಹೆಸರುಗಳಂದ ಕರೆಸಿಕೊಳ್ಳುವ ಪ್ರದೇಶದಲ್ಲಿ ವಾಸಿಸುತ್ತಿದ್ದರು. ಉದಾಹರಣೆಗೆ ಬ್ರಾಹ್ಮಣರು ಅಗ್ರಹಾರಗಳಲ್ಲಾದರೆ ಕೆಳಜಾತಿಯವರು ಕೇರಿಗಳಲ್ಲಿ ವಾಸಿಸುತ್ತಿದ್ದರು. ಯಾವುದೇ ಶೂದ್ರ ಮನೆಗಳಗೆ ಅನಿವಾರ್ಯ ಕಾರಣಕ್ಕಾಗಿ ಬ್ರಾಹ್ಮಣರು ಹೋಗಬೇಕಾಗಿ ಬಂದರೂ ಮನೆಯ ಮುಂದಿನ ಜಗುಲಿಯಲ್ಲಿ ಶುದ್ಧಮಾಡಿದ ಮರದ ಮಣೆಯ ಮೇಲೆ ಕುಳಿತಿರುತ್ತಿದ್ದರು. ಆದರೆ ಬ್ರಾಹ್ಮಣರ ಮನೆಗೆ ಹೋದರೆ ಶೂದ್ರರು ಅಂಗಳದಲ್ಲಿಯೇ ನಿಂತಿರಬೇಕಿತ್ತು. ಇವರ ನಡುವಿನ ಮಾತುಕತೆಗಳು ಕೂಡ ವಿಚಿತ್ರವಾಗಿರುತಿತ್ತು. ಬ್ರಾಹ್ಮಣ ಕಡಿಮೆ ವಯಸ್ಸಿನವನಾಗಿದ್ದರೂ ಅವನನ್ನು ಉಳದ ಜಾತಿಯವರು ಬಹುವಚನದಿಂದಲೇ ಮಾತಾಡಿಸಬೇಕು. ಅದೇ ರೀತಿ

ಬ್ರಾಹ್ಮಣ ಕೂಡ ಹಿರಿಯ ವಯಸ್ಸಿನ ಇತರ ಜಾತಿಯವರನ್ನು ಏಕವಚನದಲ್ಲಿಯೇ ಮಾತನಾಡಿಸಬೇಕು. ಇಲ್ಲದಿದ್ದರೆ ಪಾಪ ಸುತ್ತಿಕೊಳ್ಳುತ್ತದೆ ಎಂಬ ನಂಬಿಕೆಯನ್ನು ಸೃಷ್ಟಿಸಿದ್ದರು. ಆದರೆ ವಾಸ್ತವವಾಗಿ ನೋಡಿದಾಗ ಇಲ್ಲಿ ಮೇಲ್ವರ್ಗದವರ ಹೆಚ್ಚುಗಾರಿಕೆಯು ಕಾಣಿಸುತ್ತದೆ. ಇದರೊಂದಿಗೆ ಮೇಲ್ವರ್ಗದ ಜನರಿಗೆ ಕೆಳವರ್ಗದವರ ಬಗ್ಗೆ ತಿರಸ್ಕಾರ ಇರುವುದು ಸ್ಪಷ್ಟ. ಅವರನ್ನು ಮನುಷ್ಯರನ್ನು ನೋಡುವ ರೀತಿ ನೋಡುತ್ತಿರಲಿಲ್ಲ. ಹಾಗೆಯೇ ಶೂದ್ರವರ್ಗದಲ್ಲಿಯೂ ಕೆಳಜಾತಿಯವರನ್ನು ಮೇಲ್‌ಜಾತಿಯವರು ಏಕವಚನದಲ್ಲಿ ಮಾತಾಡಿಸುವುದೇ ರೂಢಿ. ಇಂತಹ ವಿಷಯಗಳೆಲ್ಲವನ್ನೂ ಹೂವಯ್ಯ ವಿರೋಧಿಸುತ್ತಿದ್ದ. ಅದು ಜೋಯಿಸರಿಗೆ ಸರಿ ಬರುತ್ತಿರಲಿಲ್ಲ.

ಅಂತಿಮವಾಗಿ ವೆಂಕಪ್ಪ ಜೋಯಿಸರಿಗೆ ಹೂವಯ್ಯನ ಮೇಲೆ ಮದುವೆ ವಿಚಾರದಲ್ಲಿ ಸೇಡು ತೀರಿಸಿಕೊಳ್ಳುವ ಸಂದರ್ಭ ಎದುರಾಗುತ್ತದೆ. ಅದನ್ನು ತಮ್ಮ ಅನುಕೂಲಕ್ಕೆ ಬಳಸಿಕೊಳ್ಳುತ್ತಾರೆ. ಇಂತಹ ಸಂದರ್ಭದಲ್ಲಿ ಮನುಷ್ಯ ಶೂದ್ರನಾಗಿರಲಿ, ಬ್ರಾಹ್ಮಣನಾಗಿರಲಿ ಅವರ ಬುದ್ಧಿ ಒಂದೇ ರೀತಿ ಕೆಲಸ ಮಾಡುತ್ತದೆ. ಜೋಯಿಸರು ನಾಲ್ಕು ಜನರಿಗೆ ಉಪದೇಶ ಮಾಡುವವರು. ಸರಿ–ತಪ್ಪುಗಳ ಅರಿವಿದ್ದ ವ್ಯಕ್ತಿ. ಆದರೂ ಹೂವಯ್ಯನ ಮೇಲೆ ಸೇಡು ತೀರಿಸಿಕೊಳ್ಳುತ್ತಾರೆ. ಅವನ ಮದುವೆಯನ್ನು ಹಲವು ಕಾರಣ ಒಡ್ಡಿ ತಡೆ ಹಿಡಿಯುತ್ತಾರೆ. ವೆಂಕಪ್ಪ ಜೋಯಿಸರ ಮನಸ್ಸನ್ನು ಕಾದಂಬರಿಕಾರರು ಈ ರೀತಿ ವಿವರಿಸುತ್ತಾರೆ. ವೆಂಕಪ್ಪ ಜೋಯಿಸರ ಅಂತರಂಗದಲ್ಲಿ ಹೂವಯ್ಯನ ಮೇಲೆ ಮಹಾರೌರವ ರೋಷವಿತ್ತು. ಅವನು ತಮ್ಮ ಪೌರೋಹಿತ್ಯವನ್ನ ನಿಂದಿಸಿ ಜನರಲ್ಲಿ ತಮ್ಮ ಲಾಭಕ್ಕೆ ವಿರೋಧವಾಗಿ ಚಳುವಳ ಮಾಡುತ್ತಿದ್ದರಿಂದ ಅವನನ್ನು ಕಂಡರೆ ಮುಂಗುಸಿಯನ್ನು ಕಂಡ ಸರ್ಪದಂತೆ ಬುಸುಗುಡುತ್ತಿದ್ದರು. ಅದಕ್ಕಾಗಿ ಚಂದ್ರಯ್ಯಗೌಡರ ಬಳಿಗೆ ಗುಟ್ಟಾಗಿ ಹೋಗಿ ಸಿಂಗಪ್ಪ ಗೌಡರು ಆಮಿಷ ತೋರಿಸಲು ಬಂದಿದ್ದನ್ನು ತಿಳಿಸಿದರು. ಇವರಿಂದ ಗೌಡರು ಜ್ವಾಲಾಮುಖಿಯಾಗಿ ಅಗ್ನಿ ಜಲವನ್ನು ಕಾರುವಂತೆ ಸಿಂಗಪ್ಪ ಗೌಡರ ಮೇಲೆ ಕ್ರೂರ ನಿಂದೆಗಳನ್ನು ಕಾರಿ ಜೋಯಿಸರಿಗೆ ದಕ್ಷಿಣೆಗಳನ್ನು ಕೊಟ್ಟು ಅವರ ಮನಸ್ಸನ್ನು ಸಂಪೂರ್ಣವಾಗಿ ತಮ್ಮೆಡೆಗೆ ಒಲಿಸಿಕೊಳ್ಳುತ್ತಾರೆ. ಕಾಣಿಕೆ ಪಡೆದ ಜೋಯಿಸರು ಹೂವಯ್ಯ ಸೀತೆಯರಿಗೆ ಜಾತಕ ಬರುವುದಿಲ್ಲವೆಂದು ಕಂಟಕಗಳಿಂದ ತುಂಬಿದೆಯೆಂದೂ, ರಾಮಯ್ಯ ಸೀತೆಯರಿಗೆ ಉತ್ತಮವಾಗಿ ಜಾತಕ ಬರುತ್ತದೆಂದೂ ತಿಳಿಸುತ್ತಾರೆ

ಈ ರೀತಿ ಎರಡು ಪೀಳಗೆಯ ನಡುವೆ ಸಾಮಾಜಿಕ ಹಿನ್ನಲೆಯಲ್ಲಿ ಬೌದ್ಧಿಕ ಹೋರಾಟವೆ ನಡೆಯುತ್ತದೆ. ಇಲ್ಲಿ ಉತ್ತಮ ಸಾತ್ವಿಕ ಗುಣಗಳನ್ನು ಬೆಳಸಿಕೊಂಡಿರಬೇಕಿದ್ದ ಜೋಯಿಸರಲ್ಲಿ ಅದು ಕಾಣುವುದೇ ಇಲ್ಲ. ಆದರೆ ಶೂದ್ರ ಜನಾಂಗದಲ್ಲಿ ಹುಟ್ಟಿದ್ದ ಹೂವಯ್ಯ ಮಾತ್ರ ಬ್ರಾಹ್ಮಣರ ಸಕಲ ಗುಣವನ್ನು ಹೊಂದಿರುತ್ತಾನೆ. ಅವನಲ್ಲಿ ಕ್ರೋಧ, ತಾಮಸ, ಮತ್ಸರ ಇವು ಯಾವುದು ಇರುವುದಿಲ್ಲ. ಆದ್ದರಿಂದ ಜೋಯಿಸರನ್ನು, ಹುಟ್ಟಿನಿಂದ ಬ್ರಾಹ್ಮಣ ಆಚಾರದಿಂದ ಶೂದ್ರ ಎಂತಲೂ ಹೂವಯ್ಯನನ್ನು ಹುಟ್ಟಿನಿಂದ ಶೂದ್ರ ಆಚಾರದಿಂದ ಬ್ರಾಹ್ಮಣ ಎಂದು ಕರೆಯಬಹುದಾಗಿದೆ.

ಹೂವಯ್ಯ ವಿದ್ಯಾವಂತ, ಆಧುನಿಕ ವಿಚಾರ ಧಾರೆಗಳನ್ನು ಜೀವನದಲ್ಲಿ ರೂಢಿಸಿಕೊಂಡವನು. ಸುಧಾರಣಾವಾದಿ, ಜನರನ್ನು ಮೌಢ್ಯದಿಂದ ಹೊರ ತರಬೇಕು. ಸಂಪ್ರದಾಯದ ಆಚರಣೆಯ ನೆವದಲ್ಲಿ ಜನರನ್ನು ಶೋಷಣೆ ಮಾಡುವುದು ಸರಿಯಲ್ಲ ಎಂಬುದು

ಅವನ ವಾದ. ಈತ ಪ್ರತಿನಿತ್ಯ ಮಹಾಕಾವ್ಯಗಳನ್ನು, ಗೀತೆಯನ್ನು ಪಠಣಮಾಡುತ್ತಿದ್ದ. ಆ ಮೂಲಕ ಬ್ರಾಹ್ಮಣರಿಗೆ ಮೀಸಲಾಗಿದ್ದ ಅಂಶವನ್ನು ಶೂದ್ರರು ಮಾಡಬಹುದು ಎಂದು ತೋರಿಸಿಕೊಡುತ್ತಾನೆ. ಇದು ಅವನ ಬಗ್ಗೆ ಜನರಿಗೆ ಅಪಾರ ಗೌರವ ಮೂಡಲು ಕಾರಣವಾಗುತ್ತದೆ.

ಆದರೆ ವೆಂಕಪ್ಪ ಜೋಯಿಸರು ಜನರಲ್ಲಿ ಮೌಢ್ಯವನ್ನು ಬಿತ್ತುತ್ತ ಸ್ವರ್ಗ ನರಕಗಳ ಕಲ್ಪನೆಯನ್ನು ಸೃಷ್ಟಿಸುತ್ತಾ, ಪಾಪ ಪುಣ್ಯಗಳ ಪ್ರಸ್ತಾಪ ಮಾಡುತ್ತಾ, ಜನರಲ್ಲಿ ಹರಕೆ, ಪೂಜೆಗಳ ಮಹತ್ವ ಹೇಳುತ್ತಾ ತಮ್ಮ ಜೀವನ ಸಾಗಿಸುವವರು. ಅದು ಅವರ ಉದ್ಯೋಗ ಕೂಡ. ಅದರೊಂದಿಗೆ ಮಂತ್ರದಿಂದಲೇ ದೆವ್ವ ಬಿಡಿಸುವ ಮತ್ತು ಹಿಡಿಸುವ ಕೆಲಸ ಮಾಡುವುದರಿಂದ ಅವರನ್ನು ಕಂಡರೆ ಜನರಿಗೆ ಭಯ, ಭಕ್ತಿ. ಜೋಯಿಸರಿಗೆ ಹೂವಯ್ಯನನ್ನು ನೇರವಾಗಿ ಜ್ಞಾನಶಕ್ತಿಯಿಂದ ಎದುರಿಸಲು ಸಾಧ್ಯವೇ ಇಲ್ಲ ಎಂಬುದು ಮನವರಿಕೆಯಾಗಿತ್ತು. ಅವನ ಗೀತಾ ಪಠಣ, ಉಪನಿಷತ್‌ಗಳ ಶ್ಲೋಕ ಉಚ್ಚರಣೆ, ಅವುಗಳಿಗೆ ವಿವರಣೆ ನೀಡುವುದು ಇದನ್ನು ಗಮನಿಸಿದ ಜೋಯಿಸರಿಗೆ ಹೀಗೆ ಬೆಳೆಯಲು ಬಿಟ್ಟರೆ ತಮ್ಮ ವೃತ್ತಿಗೆ ಮುಂದೊಂದು ದಿನ ಸಂಚಕಾರ ಬಂದರೂ ಬರಬಹುದು. ಜನರ ಮನಃ ಪರಿವರ್ತನೆಯಾಗಿ ಜನರು ದೇವರ ಹತ್ತಿರ ಬರದೆ, ವಿಭೂತಿ, ಚೀಟಿಗಳನ್ನು ಮಾಡದೆ ನೇರ ವೈದ್ಯರಲ್ಲಿಗೆ ನಡೆದರೆ ತಮ್ಮ ಜೀವನೋಪಾಯ ಹೇಗೆ ಎಂಬ ಚಿಂತೆ ಅವರನ್ನು ಕಾಡುತ್ತದೆ. ಅದಕ್ಕಾಗಿ ಚಂದ್ರೇಗೌಡರ ಮೂಲಕ ಇವರ ಬೆಳವಣಿಗೆಯನ್ನು ತಡೆಯುತ್ತಾರೆ. ಅದನ್ನು ಕಾದಂಬರಿಕಾರರು ಈ ರೀತಿ ವಿವರಿಸುತ್ತಾರೆ.

> "ಜೋಯಿಸರು ಚಂದ್ರಯ್ಯಗೌಡರನ್ನು ಉಲ್ಲೇಖಿಸಿ ನಾನು ಮೊದಲೇ ನಿನಗೆ ಹೇಳಿದ್ದೆ. ಈಗಿನ ವಿದ್ಯಾಭ್ಯಾಸ ಹುಡುಗರನ್ನು ಹಾಳು ಮಾಡಿ ಬಿಡುತ್ತದೆ ಎಂದು. ದೇವರು ದಿಂಡರು, ಭಕ್ತಿ, ಗಿಕ್ತಿ ಎಲ್ಲಾ ನಿರ್ನಾಮ ಜೊತೆಗೆ ನೂರಾರು ಹವ್ಯಾಸಗಳು ಕಲಿತುಬಿಡುತ್ತಾರೆ. ನಿನ್ನ ಮನೆ, ಜಮೀನು ಉಳಿಯಬೇಕಾದರೆ ಅವರ ಓದು ನಿಲ್ಲಿಸಿ ಮದುವೆ ಮಾಡಿ ಕೆಲಸಕ್ಕೆ ಹಚ್ಚು. ಸಂಸಾರ ಉಳಿಯುತ್ತದೆ. ಈ ಶೂದ್ರ ಮಕ್ಕಳಿಗೆಲ್ಲ ಉಪನಿಷತ್ತು, ಭಗವದ್ಗೀತೆ ಗಂಧವಾದರೂ ಗೊತ್ತಾಗುತ್ತದೆಯೇ? ದೇವರ ಕೋಪಕ್ಕಾದರೂ ಪಾತ್ರರಾಗಬಹುದು. ಏಕೆಂದರೆ ಅವನು ದಯಾಸಾಗರ. ಕರುಣಾಶಾಲಿ. ಆದರೆ ಈ ಭೂತ ದೆವ್ವಗಳ ಸಿಟ್ಟಿಗೆ ಬಿದ್ದರೆ ಉಳಿಗತಿಯಿಲ್ಲ. ಹೀಗೆ ಚಂದ್ರಯ್ಯಗೌಡರಿಗೆ ಹಿತ ಎನಿಸುವ ರೀತಿಯಲ್ಲಿ ಹೇಳಿ ಹೂವಯ್ಯ ತನ್ನ ಪ್ರತಿಸ್ಪರ್ಧಿ ಆಗದಿರುವಂತೆ ನೋಡಿಕೊಳ್ಳುವ ಪ್ರಯತ್ನ ಮಾಡುತ್ತಾರೆ" (ಕಾನೂರು ಹೆಗ್ಗಡತಿ, ಪು.ಸಂಖ್ಯೆ.78)

ಇದೇನೇ ಆದರೂ ಹೂವಯ್ಯ ಮಾತ್ರ ಜೋಯಿಸರಂತೆ ಹಿಂಬಾಗಿಲ ಹಾದಿ ಹಿಡಿಯದೆ ತನಗನಿಸಿದ್ದನ್ನು ನೇರವಾಗಿ ಯಾವುದೇ ಅಂಜಿಕೆ ಇಲ್ಲದೇ ಹೇಳುತ್ತಿದ್ದ. ಇದರಿಂದ ಅವನನ್ನು ನೋಡುವುದು ಜೋಯಿಸರಿಗೆ ಜಿಗುಪ್ಸೆಯಾಯಿತು. ಅವನ ಸಾಮರ್ಥ್ಯ ಬೇರೆಯವರಿಗಿಂತ

ಜೋಯಿಸರಿಗೆ ಚೆನ್ನಾಗಿಯೇ ತಿಳಿದಿತ್ತಲ್ಲ. ಆದ್ದರಿಂದ ಅವನ ವಿಷಯದಲ್ಲಿ ಒಂದು ರೀತಿಯ ಭಯವೂ ಇತ್ತು. ಆದ್ದರಿಂದ ಇವರಿಬ್ಬರ ನಡುವೆ ಕೆಲವು ವಿಷಯಗಳಲ್ಲಿ ಬಿಸಿ ಚರ್ಚೆಯೇ ನಡೆಯುತ್ತಿತ್ತು. ಆಗ ಜೋಯಿಸರು ಇತರರನ್ನು ಹೆದರಿಸಲು ಆಚಾರ, ದೇವರು, ವೇದ ಶಾಸ್ತ್ರಗಳನ್ನೆಲ್ಲ ಅಲ್ಲಗಳೆಯುವ ನಿನಗೆ ಕೇಡು ತಪ್ಪಿದ್ದಲ್ಲ ಎನ್ನುತ್ತಾರೆ. ಇವುಗಳ ಪರಿಚಯ ಚೆನ್ನಾಗಿ ಇರುವುದರಿಂದಲೇ ಹೂವಯ್ಯ ಕೆಲವು ನಿರ್ಧಾರಗಳನ್ನು ತೆಗೆದುಕೊಳ್ಳುತ್ತಿದ್ದ. ಹೀಗಿದ್ದು ಕೂಡ ಬೇರೆಯವರ ವಿಷಯದಲ್ಲಿ ಧಾರ್ಮಿಕವಾಗಿ ಸುಲಭ ನಿರ್ಧಾರ ತೆಗೆದುಕೊಳ್ಳುತ್ತಿದ್ದ ಹೂವಯ್ಯನಿಗೆ ಸ್ವಂತ ವಿಷಯದಲ್ಲಿ ಅಷ್ಟು ಸುಲಭವಾಗಿ ನಿರ್ಧಾರ ತೆಗೆದುಕೊಳ್ಳಲು ಸಾಧ್ಯವಾಗುವುದೇ ಇಲ್ಲ. ಇದೊಂದು ವಿಪರ್ಯಾಸ ಎನ್ನಬಹುದು.

ಆರ್ಥಿಕ ವಿಷಯಕ್ಕೆ ಸಂಬಂಧಿಸಿದಂತೆ ಇವರಿಬ್ಬರ ನಡುವೆಯೂ ಭಿನ್ನಾಭಿಪ್ರಾಯಗಳಿದ್ದವು. ಅಂದರೆ ಜನರ ಮೌಢ್ಯವನ್ನು ಜೋಯಿಸರು ತಮ್ಮ ಆದಾಯವನ್ನಾಗಿ ಮಾಡಿಕೊಂಡಿದ್ದಾರೆ ಎಂದು. ಅದಕ್ಕಾಗಿ ಹೂವಯ್ಯ ಜೋಯಿಸರ ಮೇಲೆ ನೇರ ಆರೋಪವನ್ನು ಮಾಡುತ್ತಾನೆ. ಅವರನ್ನು ಉದ್ದೇಶಿಸಿ ನೀವು ತಿಳಿದವರೆಂದುಕೊಂಡು ಹಳ್ಳಿಯವರಿಗೆ ಮೌಢ್ಯವನ್ನೆ ಉಪದೇಶ ಮಾಡಿ. ನಿಮಿತ್ತ ಹೇಳುವುದು, ವಿಭೂತಿ ಕೊಡುವುದು, ಸತ್ಯನಾರಾಯಣ ವ್ರತ ಮಾಡಿಸುವುದು, ದೆವ್ವ, ಪಿಶಾಚಿಗಳಿಗೆ ಬಲಿಕೊಡುವುದು ಇದರಿಂದ ಹೊಟ್ಟೆ ಹೊರೆದುಕೊಳ್ಳುವುದು ಮಾಡುವಿರಿ. ಟ್ರಂಕು ತಗುಲಿ ಬೆನ್ನು ನೋವಾಗಿದ್ದರೆ ಔಷಧಿ ಮಾಡಿ ಎಂದು ಹೇಳುವ ಬದಲು ಬೂದಿ, ಕುಂಕುಮ ಹಚ್ಚಿ, ಮಂತ್ರ ಹಾಕಿಸಿ ಎಂದು ಹೇಳುತ್ತಿದ್ದಿರಲ್ಲಾ ಇದು ಯಾವ ಶಾಸ್ತ್ರದಲ್ಲಿ ಹೇಳಿದೆ? ನಿಮ್ಮ ಬೋಧನೆಯಿಂದ ಎಷ್ಟು ಜನರು ರೋಗಕ್ಕೆ ಸರಿಯಾಗಿ ಮದ್ದು ಮಾಡದೇ ಬರಿಯ ಬೂದಿ ವಿಭೂತಿಗಳನ್ನು ಹಚ್ಚಿಕೊಂಡು ಪ್ರಾಣ ಕಳೆದುಕೊಳ್ಳುತ್ತಿದ್ದಾರೆ ಎಂದು ರಭಸದಿಂದಲೇ ಹೇಳುತ್ತಾನೆ. ಹೂವಯ್ಯ ಈ ರೀತಿ ಮಾತಾಡಲೂ ಕಾರಣವಿತ್ತು. ತನ್ನ ತಂದೆಯ ಸಾವಿಗೆ ಅವರೆ ಕಾರಣ ಎಂದು ಆತ ಬಲವಾಗಿ ನಂಬಿದ್ದ. ಜೋಯಿಸರ ಪಾತ್ರ ಎಲ್ಲೆ ಪ್ರವೇಶವಾದರೂ ಅದು ದಾನ, ದಕ್ಷಿಣೆಗಳಿಂದೊಳಗೂಡಿಯೆ ನಿರ್ಗಮಿಸುವುದು. ಆದರೆ ಹೂವಯ್ಯ ಹಾಗಲ್ಲ. ಅವನು ಯಾರಿಗೆ ಯಾವ ಸಹಾಯ ಮಾಡಿದರೂ ಪ್ರತಿಫಲ ಅಪೇಕ್ಷಿಸುವುದಿಲ್ಲ. ಅದು ಸೀತೆಯ ವಿಚಾರವಲ್ಲಿರಬಹುದು, ಸೋಮನದ್ದಾಗಿರಬಹುದು ಅಥವಾ ಸೇಸಿಯ ಮಗ ಗಂಗನ ವಿಚಾರದಲ್ಲಿರಬಹುದು ಇಲ್ಲವೇ ಬೈರನದ್ದಾಗಿರಬಹುದು. ಎಲ್ಲಾ ಕಡೆಯೂ ಹೂವಯ್ಯನದು ನಿಸ್ವಾರ್ಥ ಸೇವೆ.

ಆದ್ದರಿಂದಾಗಿ ಹೂವಯ್ಯ ಮತ್ತು ಜೋಯಿಸರ ನಡುವೆ ತಲೆಮಾರಿನ ಅಂತರವಿದ್ದರೂ ಇಬ್ಬರ ದೃಷ್ಟಿಕೋನ ಬೇರೆ ಬೇರೆಯೇ ಎನ್ನಬಹುದು. ಮದುವೆಯ ಮನೆಯಲ್ಲಿ ಬೆಂಕಿಯ ಅನಾಹುತ ನಡೆಯುತ್ತಲೆ ಇದ್ದರೂ ಕೂಡ ಏನು ಆಗಿಲ್ಲ ಎನ್ನುವಂತೆ ತಮ್ಮ ಕೆಲಸ ಮುಂದುವರೆಸಿ ಸೀತೆ–ರಾಮಯ್ಯರಿಗೆ ವಿವಾಹವಾಯಿತು ಎಂದು ಘೋಷಿಸುತ್ತಾರೆ. ತಮ್ಮ ದಾನ ದಕ್ಷಿಣೆಗಳನ್ನು ಗಂಟು ಮೂಟೆ ಕಟ್ಟುತ್ತಾರೆ. ಇದು ಕೂಡ ಅವರ ಧನ ಪಿಶಾಚ ಸ್ವಭಾವದ ಲಕ್ಷಣವಲ್ಲದೆ ಮತ್ತಿನ್ನೇನು? ಅಲ್ಲವೇ.

## ಚಂದ್ರಯ್ಯ ಗೌಡ ಮತ್ತು ರಾಮಯ್ಯ ನಡುವಿನ ಅಂತರ

ಚಂದ್ರಯ್ಯ ಗೌಡ ಕಾನೂರು ಕುಟುಂಬದ ಯಜಮಾನ. ಮಧ್ಯವ್ಯಸನಿ. ಕ್ರೂರಿ. ವಿಷಯ ಲಂಪಟ. ಮುಂಗೋಪಿಯೂ ಆದ ಈತ ಒಂದು ವಿಧದಲ್ಲಿ ಖಳನಾಯಕನಂತೆ ಕಾಣಿಸಿಕೊಳ್ಳುತ್ತಾನೆ. ರಾಮಯ್ಯ ಚಂದ್ರೇಗೌಡನ ಮೊದಲನೆಯ ಹೆಂಡತಿಯ ಮಗ. ಹೂವಯ್ಯನೊಡನೆ ಮೈಸೂರಿನಲ್ಲಿ ವಿದ್ಯಾಭ್ಯಾಸ ಮಾಡುತ್ತಿದ್ದವನು. ರಾಮಯ್ಯ ತನ್ನ ತಂದೆಯ ಇಚ್ಚೆಯಂತೆ ವಿದ್ಯಾಭ್ಯಾಸಕ್ಕೆ ತಿಲಾಂಜಲಿ ಇಡಬೇಕಾಗುತ್ತದೆ. ತಂದೆಯ ಕುತಂತ್ರದಿಂದಾಗಿ ವರಸೆಯಲ್ಲಿ ಅಣ್ಣನಾದ ಹೂವಯ್ಯನನ್ನು ದ್ವೇಷಿಸಲು ಪ್ರಾರಂಭಿಸುತ್ತಾನೆ. ಇಲ್ಲಿ ತಂದೆ ಮತ್ತು ಮಗನ ನಡುವೆ ಬಹಳಷ್ಟು ವ್ಯತ್ಯಾಸಗಳಿವೆ. ಇಂತಹ ವ್ಯತ್ಯಾಸಕ್ಕೆ ಅವರ ಸುತ್ತಲಿನ ವಾತಾವರಣ, ಸಾಮಾಜಿಕ ಹಿನ್ನಲೆ, ಶಿಕ್ಷಣ, ಆರ್ಥಿಕ ಸ್ಥಿತಿಗತಿಗಳು ಅವರಿಬ್ಬರ ನಡುವೆ ದೊಡ್ಡ ಅಂತರವನ್ನು ಸೃಷ್ಟಿಮಾಡುತ್ತದೆ. ತಂದೆಗೆ ಮಗನ ಮೇಲೆ ಯಾವುದೇ ವಿಶೇಷವಾದ ಮಮಕಾರವಿಲ್ಲ. ಬದಲಾಗಿ ಆತನ ಮೇಲೋ, ಇತರರ ಮೇಲೆ ಮಾಡುವ ದಬ್ಬಾಳಿಕೆಯನ್ನು ಮುಂದುವರಿಸುತ್ತಾನೆ. ಅವನೊಂದಿಗೆ ಪ್ರೀತಿಯಿಂದ ಮಾತಾಡುವುದಾಗಲೀ, ವಿಶ್ವಾಸದಿಂದ ನೋಡುವುದಾಗಲೀ ಮಾಡುವುದಿಲ್ಲ. ಇದು ಕೇವಲ ಇವರಿಬ್ಬರ ವಿಷಯವಲ್ಲ. ಆ ಕಾಲದಲ್ಲಿ ಎಲ್ಲಾ ತಂದೆ ಮಕ್ಕಳು ಅದೇ ರೀತಿ ಜೀವಿಸುತ್ತಿದ್ದರು. ಉದಾಹರಣೆಯಾಗಿ ಶಾಮೇಗೌಡ ಮತ್ತು ಚಿನ್ನಯ್ಯ, ಸಿಂಗಪ್ಪ ಗೌಡ ಮತ್ತು ಕೃಷ್ಣಪ್ಪ ಈ ತಂದೆ ಮಕ್ಕಳ ನಡುವಿನ ಸಂಬಂಧವು ಮೇಲೆ ಹೇಳಿದ ರೀತಿಯಲ್ಲಿಯೇ ಇರುತ್ತದೆ. ಇವರ ನಡುವಿನ ಅಂತರಕ್ಕೆ ಕಾರಣವಾದ ಅಂಶಗಳು ಎಂದರೆ,

ಸಂಬಂಧದಲ್ಲಿ ರಾಮಯ್ಯ ಚಂದ್ರೇಗೌಡರ ಮೊದಲನೆಯ ಹೆಂಡತಿ ಮಗ. ಚಂದ್ರೇಗೌಡರು ಮೂರು ಮದುವೆಯನ್ನು ಮಾಡಿಕೊಂಡಿದ್ದು ಗಮನಾರ್ಹ. ಪ್ರತಿ ಬಾರಿಯೂ ಹಿಂದಿನ ಹೆಂಡತಿಯ ಅಗಲಿಕೆಯ ನೋವು ಬರಿಸಲಾಗದೇ ಹೊಸ ಹೆಂಡತಿಯನ್ನು ತಂದುಕೊಳ್ಳುತ್ತಾರೆ. ಇಲ್ಲಿ ಗಮನಿಸಬೇಕಾದದ್ದು ಯಾವುದೇ ವ್ಯಕ್ತಿಯ ದುಃಖ, ನೋವು, ಸಂಕಟ ಇವೆಲ್ಲವೂ ಕೆಲವೇ ದಿನ ಮಾತ್ರ. ನಂತರ ಕಾಲ ಎಲ್ಲವನ್ನೂ ಮರೆಯುವಂತೆ ಮಾಡುತ್ತದೆ. ಮನುಷ್ಯ ಸಂಘ ಜೀವಿಯಾದ್ದರಿಂದ ವ್ಯಕ್ತಿಗಳೊಂದಿಗೆ ಬದುಕಬೇಕು. ಆಗ ಸಹಜವಾಗಿ ಇನ್ನೊಬ್ಬರ ಹಾಗೆ ನಾವು ಇರಬೇಕು ಎಂಬುದು ಎಲ್ಲರಿಗೂ ಅನಿಸುತ್ತದೆ. ಆ ಕಾಲದಲ್ಲಿ ಮರುವಿವಾಹಗಲು, ಹೆಂಡತಿಯರ ಸಾವು, ಬಹು ಪತ್ನಿತ್ವ, ಕೂಡಿಕೆಯಂತಹ ವಿಚಾರಗಳು ಸಾಮಾನ್ಯ. ಇದರೊಂದಿಗೆ ತೆರಕೊಡುವ ಪದ್ಧತಿಯೂ ಜಾರಿಯಲ್ಲಿತ್ತು. ಆದ್ದರಿಂದ ಚಂದ್ರಯ್ಯಗೌಡರಂತಹ ಶ್ರೀಮಂತರು ಮೂರು ಮೂರು ವಿವಾಹವಾದರೂ ಕೇಳುವವರಿಲ್ಲ. ಬದಲಾಗಿ ಬಡವರಿಗೆ ಒಂದು ಮದುವೆಯಾಗುವುದು ಕಷ್ಟಸಾಧ್ಯವಾಗಿತ್ತು.

ಸಾಮಾಜಿಕವಾಗಿ ತಂದೆ ಮತ್ತು ಮಗನ ನಡುವೆ ಭಿನ್ನತೆಯನ್ನು ಕಾಣುತ್ತೇವೆ. ಅಂದರೆ ರಾಮಯ್ಯ ಅಕ್ಷರಸ್ಥ, ವಿದ್ಯಾವಂತ, ಚಂದ್ರಯ್ಯಗೌಡ ಅವಿದ್ಯಾವಂತ. ರಾಮಯ್ಯನಿಗೆ ಸದಾ ಸುಸಂಸ್ಕೃತರು, ನಾಗರೀಕರ ನಡುವೆ ಸಂಪರ್ಕ, ಹೂವಯ್ಯನಂತಹ ಮಾರ್ಗದರ್ಶಕರು ಇದ್ದರು. ಸಾತ್ವಿಕ ಸ್ವಭಾವದವರು. ವೈಚಾರಿಕತೆಯನ್ನು ಮೈಗೂಡಿಸಿಕೊಂಡವರೊಂದಿಗೆ ಸದಾ

ಬೆರೆಯುತ್ತಿದ್ದ ರಾಮಯ್ಯ ಅಂತಹದೇ ಸ್ವಭಾವವನ್ನು ಬೆಳೆಸಿಕೊಂಡು ಹೋಗುತ್ತಾನೆ. ಆದರೆ ಚಂದ್ರೇಗೌಡರಿಗೆ ಓದು ಬರಹ ಬಾರದು. ಒರಟು ಸ್ವಭಾವದ ವ್ಯಕ್ತಿ. ಇವರ ಸಂಪರ್ಕವು ಅಂತವರೊಂದಿಗೆ ಸೇರೆಗಾರರಂತಹ ಮಾರ್ಗದರ್ಶಕರನ್ನು ಹೊಂದಿದ್ದ ಚಂದ್ರಯ್ಯ ಗೌಡರಲ್ಲಿ ಸಾತ್ವಿಕ ವರ್ತನೆ ಕಂಡು ಬರುವುದರ ಬದಲು ರಾಕ್ಷಸ ಗುಣಗಳನ್ನು ಮೈಗೂಡಿಸಿಕೊಳ್ಳುತ್ತಾರೆ. ತಾಮಸ ಪ್ರವೃತ್ತಿ ಅವರದು. ಇದರಿಂದಾಗಿ ತಂದೆ ಮತ್ತು ಮಗನ ನಡುವೆ ವೈಮನಸ್ಸು ಪ್ರಾರಂಭವಾಗುತ್ತದೆ. ತಂದೆಯ ನಡತೆ ತಪ್ಪು ಎಂದು ತಿಳಿದಿದ್ದರೂ ಅದನ್ನು ತಡೆಯುವ ಧೈರ್ಯ ರಾಮಯ್ಯನಿಗಿರಲಿಲ್ಲ. ಚಂದ್ರೇಗೌಡರಿಗೆ ತಾನು ಮಾಡಿದ್ದೇ ಸರಿ ನನ್ನನ್ನು ಪ್ರಶ್ನಿಸುವ ಹಕ್ಕು ಯಾರಿಗೂ ಇಲ್ಲ ಎಂಬುದೆ ಅವರ ನಂಬಿಕೆ.

ವಯಸ್ಸಿಗೆ ಬಂದ ವಿದ್ಯಾವಂತ ಮಕ್ಕಳಿಗೆ ತಮ್ಮ ತಂದೆ ಮರು ಮದುವೆಯಾಗುವುದು ಅವಮಾನಕರ. ಅದನ್ನು ಅವರು ಕನಸ್ಸಿನಲ್ಲಿಯೂ ಯೋಚಿಸಲಾರರು. ಆದರೆ ಗ್ರಾಮ್ಯ ಸ್ವಭಾವ ಚಂದ್ರೇಗೌಡರಿಗೆ ಅದು ಸಾಮಾನ್ಯ ವಿಷಯ. ತಂದೆಯ ಈ ನಿರ್ಧಾರವು ಕೂಡ ಅವರಲ್ಲಿ ಅಂತರವನ್ನು ಇನ್ನೂ ಹೆಚ್ಚು ಮಾಡುತ್ತದೆ. ಕಾದಂಬರಿಕಾರರು ರಾಮಯ್ಯನ ವರ್ತನೆಯನ್ನು ವಿವರಿಸುತ್ತಾ

> "ಅವನದು ಸ್ವಾಭಾವಿಕವಾಗಿ ಕೋಮಲ ಪ್ರಕೃತಿ ದೃಢಚಿತ್ತದವನಲ್ಲ. ಚಿಕ್ಕನಂದಿನಿಂದಲೂ ತಂದೆಯ ವಿಷಯದಲ್ಲಿ ಬೆಳೆದು ಬಂದಿದ್ದ ಭೀತಿ ಅವನನ್ನು ಹೆದರದೆಯಾಗಿ ಮಾಡಿತ್ತು. ಅವನಲ್ಲಿದ್ದ ಉದಾತ್ತ ಹೃದಯಕ್ಕೆ ತಕ್ಕ ಮನೋಬಲ ಇದ್ದಿದ್ದರೆ ಸಂಸಾರದಲ್ಲಿ ಮುಂದೆ ಪ್ರಾಪ್ತವಾಗುವ ಹೃದಯ ವಿದ್ರಾವಕವಾದ ಅನಾಹುತ ನಡೆಯುತ್ತಿರಲಿಲ್ಲ. ಹೂವಯ್ಯನಲ್ಲಿ ಅವನಿಗಿದ್ದ ಗೌರವ, ಪ್ರೀತಿಗಳಿಗೂ ಅದೇ ಕಾರಣವೆಂದು ತೋರುತ್ತದೆ. ತನ್ನಲ್ಲಿಲ್ಲದ ಹೃದಯ ಬಲ, ಮನಃಸ್ಥೈರ್ಯ, ದೃಢಚಿತ್ತತೆ ಅವನಲ್ಲಿದ್ದುದರಿಂದ ಅವನನ್ನು ಆದರ್ಶಮೂರ್ತಿಯೆಂದು ಭಾವಿಸಿ ಆರಾಧಿಸುತ್ತಿದ್ದನು" {ಕಾನೂರು ಹೆಗ್ಗಡತಿ ಪುಟ ಸಂಖ್ಯೆ.191}

ಇವೆಲ್ಲದಕ್ಕೂ ವಿರುದ್ಧ ಸ್ವಭಾವ ಚಂದ್ರಯ್ಯಗೌಡರದು. ತಮ್ಮ ಇಷ್ಟಾನಿಷ್ಟಗಳನ್ನು ತಮಗಿಂತ ಕಿರಿಯನಾದವನಲ್ಲಿ ಹೇಳಿಕೊಳ್ಳುವುದು ಅವಮಾನ. ತನ್ನ ಅಂತಸ್ಥಿಗೆ ತಕ್ಕದಾದುದಲ್ಲ ಎಂದು ಭಾವಿಸಿದ್ದರು. ಹಾಗಾಗಿ ಮಕ್ಕಳೊಡನೆ ಅಂತರ ಕಾಯ್ದುಕೊಂಡಿದ್ದರು. ಅವರಿಗೆ ಸ್ವಚ್ಚತೆ, ಓದು, ಪದವಿ ಇವುಗಳ ಬಗ್ಗೆ ಆಸಕ್ತಿ ಇರಲಿಲ್ಲ. ಆದ್ದರಿಂದಲೇ ಹೂವಯ್ಯ ರಾಮಯ್ಯನನ್ನು ಕಂಡಾಗ ಅವಹೇಳನ ಮಾಡಿ ಸದಾ ಅಪಹಾಸ್ಯ ಮಾಡುತ್ತಾರೆ.

ಆರ್ಥಿಕವಾಗಿ ಚಂದ್ರೇಗೌಡರು ಶ್ರೀಮಂತರು. ವ್ಯವಸಾಯದೊಂದಿಗೆ ಲೇವಾದೇವಿ ವ್ಯವಹಾರವನ್ನು ಮಾಡುತ್ತಿದ್ದರು. ಲೇವಾದೇವಿ ವ್ಯವಹಾರಕ್ಕೆ ಬೇಕಾದ ಕಠಿಣ ಹೃದಯ ದೂರ್ತ ಸ್ವಭಾವವನ್ನು ಸಹಜವಾಗಿ ಅವರು ಹೊಂದಿದ್ದರು. ಆದರೆ ಇವರ ಮಗ ಹಣ, ವ್ಯವಹಾರ,

ಶ್ರೀಮಂತಿಕೆಯ ಬಗ್ಗೆ ತಂದೆಗಿಂತ ಭಿನ್ನ ದೃಷ್ಟಿಕೋನವನ್ನು ಹೊಂದಿದ್ದ. ಚಂದ್ರಯ್ಯ ಗೌಡರ ದೃಷ್ಟಿಯಲ್ಲಿ ಆಸ್ತಿಯೇ ಸರ್ವಸ್ವ. ಅದಕ್ಕಾಗಿ ಹಣ ಮಾಡಬೇಕು. ಬಂಗಾರ ಕೂಡಿಡಬೇಕು. ತೋಟವನ್ನು ಮಾಡಬೇಕು. ಹೊಸ ಆಸ್ತಿಯನ್ನು ಕೊಂಡುಕೊಳ್ಳಬೇಕು ಎಂಬುದು ಅವರ ವಾದ. ರಾಮಯ್ಯನ ದೃಷ್ಟಿಯಲ್ಲಿ ಈ ರೀತಿ ಶ್ರೀಮಂತಿಕೆ ವ್ಯರ್ಥ. ಓದು, ಪದವಿ, ಶಿಕ್ಷಣ, ಪುಸ್ತಕಗಳು ನಿಜವಾದ ಆಸ್ತಿ.

ರಾಮಯ್ಯ ತಮ್ಮ ಆಳುಗಳನ್ನು ಮಾನವೀಯ ದೃಷ್ಟಿಯಲ್ಲಿ ನೋಡುತ್ತಾನೆ. ಅವರಿಗೆ ಗೌರವ ಕೊಡುತ್ತಾನೆ. ಆದರೆ ತಂದೆ ಆಳುಗಳನ್ನು ನೋಡುವುದು ವ್ಯವಹಾರದ ದೃಷ್ಟಿಯಿಂದ ಅವರೊಂದಿಗೆ ಮಾನವೀಯ ಸಂಬಂಧಗಳನ್ನು ಇಟ್ಟುಕೊಳ್ಳುವುದಿಲ್ಲ. ಮನೆ ಪಾಲಾಗುವಾಗಲೂ ಎಲ್ಲಾ ವಸ್ತುಗಳನ್ನು ಕೇವಲ ಭೌತಿಕವಾಗಿ ನೋಡುವ ಜಾಯಮಾನ ಚಂದ್ರಯ್ಯ ಗೌಡರದ್ದು. ಅದಕ್ಕಾಗಿ ಮನೆಯು ಪಾಲಾಗುವಾಗ ಅನೇಕ ಉಪಾಯಗಳಿಂದ ಆಭರಣ, ಚರಸ್ವತ್ತುಗಳನ್ನು ಮನೆಯ ಜೀತದಾಳುಗಳನ್ನು ತಮ್ಮ ವಶ ಮಾಡಿಕೊಳ್ಳುತ್ತಾರೆ. ಇದು ಅವರ ಧನದಾಹ ಸ್ವಭಾವಕ್ಕೆ ಉದಾಹರಣೆಯಾಗುತ್ತದೆ. ಆದರೆ ಮತ್ತೊಂದು ಪೀಳಿಗೆಯಲ್ಲಿ ಬರುವ ರಾಮಯ್ಯ ಇದಕ್ಕೆ ವಿರುದ್ಧವಾಗಿರುತ್ತಾನೆ. ಆತನಿಗೆ ಈ ಯಾವ ವಿಷಯದಲ್ಲೂ ಆಸಕ್ತಿ ಇಲ್ಲ. ಹಣ ಮಾಡಬೇಕೆಂದು ಇನ್ನೊಬ್ಬರಿಗೆ ಮೋಸ ಮಾಡಬೇಕೆಂದು ಆತ ಕನಸಿನಲ್ಲಿಯೂ ಯೋಚಿಸಲಾರ. ತಂದೆಯ ಒತ್ತಾಯ ಮತ್ತು ಹೆದರಿಕೆಗೆ ಮಣಿದು ಎಲ್ಲಾದಕ್ಕೂ ತಲೆಯಾಡಿಸುತ್ತಾನೆ.

ಒಂದು ಹಂತದವರೆಗೆ ಈ ಎಲ್ಲಾವನ್ನೂ ಒಪ್ಪಿಕೊಂಡ ರಾಮಯ್ಯ ತನ್ನ ಚಿಂತನೆಗೆ, ಆದರ್ಶಕ್ಕೆ ವಿರುದ್ಧವಾಗಿ ತಂದೆ ನಡೆಯುತ್ತಿದ್ದರೂ ಸಹಿಸಿಕೊಂಡಿದ್ದ. ಆದರೆ ಸೀತೆಗೆ ಇವರು ನೀಡಿದ ಹಿಂಸೆಯಿಂದ ಕಂಗಾಲಾದ ರಾಮಯ್ಯ ತಂದೆಯ ಎಲ್ಲಾ ತಪ್ಪುಗಳನ್ನು ಅವರಿಗೆ ಮುಖಕ್ಕೆ ರಾಚುವಂತೆ ಹೇಳಿ ಹೂವಯ್ಯನಲ್ಲಿ ಕ್ಷಮೆ ಬೇಡುತ್ತೇನೆ ಎಂದು ಹೊರಟಾಗ ಚಂದ್ರೇಗೌಡರು ಅಪ್ರತಿಭರಾಗುತ್ತಾರೆ. ಅವರ ಹೃದಯ ಶ್ವಾಸಕೋಶಗಳನ್ನು ಕಿತ್ತು ಹಾಕಿದರೂ ಅವರಿಗೆ ಹಾಗಾಗುತ್ತಿರಲಿಲ್ಲ. ವಿಕಾರ ಧ್ವನಿಯಿಂದ "ದಮ್ಮಯ್ಯ ಮಾರಾಯ ಅಷ್ಟುಪಕಾರ ಮಾಡೂ, ನಿನ್ನ ಕಾಲಿಗೆ ಬೀಳ್ತೇನಿ. ಖಂಡಿತಾ ಬೇಡಾ" ಎಂದು ಕೂಗುತ್ತಾ ಓಡಿಹೋಗಿ ರಾಮಯ್ಯನ ಕೈಗಳನ್ನು ಭದ್ರವಾಗಿ ಹಿಡಿದು ಅಳು ಧ್ವನಿಯಿಂದ "ಅಯ್ಯೋ ಮಗನೆ ನಿನಗಾಗಿ ಅಲ್ಲೇನೂ ನಾ ಇಷ್ಟೆಲ್ಲಾ ಮಾಡಿದ್ದು, ನನ್ನ ಕುತ್ತಿಗೆ ಕುಯ್ಯಬೇಡಾ, ಹೆತ್ತ ಹೊಟ್ಟೆಗೆ ಕಿಚ್ಚಿಡಬೇಡೋ, ನಿನ್ನ ಧಮ್ಮಯ್ಯ, ತಣ್ಣಗೆ ಕಣ್ಣು ಮುಚ್ಚಿಕೊಳ್ತೇನಿ. ಆಮೇಲೆ ಏನಾದ್ರೂ ಮಾಡಿಕೋ. ನಿನ್ನ ಮನೆ, ನಿನ್ನ ಆಸ್ತಿ, ಎಲ್ಲಾ ನಿನ್ದೆ, ನನ್ದೇನಿದೆಯೊ ಎಂದು ಸುಸ್ತಾಗಿ ಕುಳಿತು ಬಿಡುತ್ತಾರೆ. ಬಹುಶಃ ಈ ಹಂತದಲ್ಲಿಯೇ ರಾಮಯ್ಯನ ಹೃದಯ ಆರ್ಥಿಕ ವಿಚಾರವಾಗಿ ಪರಿವರ್ತನೆ ಆಯಿತು ಎನ್ನಬಹುದು.

ತಂದೆ ಮಗ ಇಬ್ಬರನ್ನು ಎರಡು ಪೀಳಿಗೆಯೆಂದು ವಿಭಾಗ ಮಾಡಿದರೆ ಪ್ರಾರಂಭದಲ್ಲಿ ಬಹಳಷ್ಟು ವ್ಯತ್ಯಾಸಗಳಿದ್ದವು. ಚಂದ್ರೇಗೌಡರು ಊರನ್ನು ಕೆಲವೇ ಕೆಲವು ಸಂದರ್ಭದಲ್ಲಿ ಬಿಟ್ಟವರು. ಅವರೊಂದು ನಿಂತ ನೀರಿನಂತೆ. ಅವರ ಸುತ್ತಮುತ್ತಲಿನದೆ ಪ್ರಪಂಚ ಎಂದು

ತಿಳಿದವರು. ಅವರಲ್ಲಿ ಸಂಪ್ರದಾಯ, ಮೂಢನಂಬಿಕೆ, ಕಂದಾಚಾರ, ಮನೆ ಮಾಡಿದ್ದವು. ಆದ್ದರಿಂದ ದೇವರು, ದೆಯ್ಯ ಎರಡನ್ನು ನಂಬುತ್ತಿದ್ದರು. ಪೂಜೆ ಹರಕೆ ತಪ್ಪದೆ ಪ್ರತಿವರ್ಷ ಆಚರಿಸುತ್ತಿದ್ದರು. ದೇವರಲ್ಲಿ ಭಯ ಭಕ್ತಿ ಒಂದಿಂಚು ಕಡಿಮೆಯಾಗದಂತೆ ನೋಡಿಕೊಳ್ಳಲು ಜೋಯಿಸರಂತವರು ಅವರೊಂದಿಗಿದ್ದಾರೆ.

ರಾಮಯ್ಯ ಹೀಗಿಲ್ಲ. ಆತ ಒಂದಷ್ಟು ವೈಜ್ಞಾನಿಕ ಪುಸ್ತಕಗಳನ್ನು ಓದಿ ತಿಳಿದುಕೊಂಡು ವೈಚಾರಿಕತೆಯನ್ನು ಬೆಳೆಸಿಕೊಂಡವನು. ಅವನೊಂದಿಗೆ ನಗರವಾಸಿಯ ಅನುಭವವಿದೆ. ಆದ್ದರಿಂದ ಯಾವುದನ್ನು ತಕ್ಷಣಕ್ಕೆ ನಂಬುವ ವ್ಯಕ್ತಿತ್ವ ಅವನದಲ್ಲ. ಇದಕ್ಕೆ ನಿದರ್ಶನವಾಗಿ ಹೂವಯ್ಯನ ಬೆನ್ನಿಗೆ ಟ್ರಂಕ್ ತಗುಲಿದಾಗ ಜೋಯಿಸರು ವಿಭೂತಿ, ತಂತ್ರ, ಪೂಜೆಯಿಂದ ನೋವನ್ನು ವಾಸಿ ಮಾಡುತ್ತೇನೆ ಎಂದಾಗ ಹೂವಯ್ಯನೊಂದಿಗೆ ಸೇರಿ ಜೋಯಿಸರನ್ನು ಅಪಹಾಸ್ಯ ಮಾಡುತ್ತಾನೆ. ಈ ಸಂದರ್ಭದಲ್ಲಿ ಎರಡು ಪೀಳಿಗೆಯ ನಡುವೆ ಚಿಕ್ಕ ಮಾತಿನ ಸಮರವೇ ನಡೆದು ಹೋಗುತ್ತದೆ. ಒಂದು ಗುಂಪಿನಲ್ಲಿ ಯುವಕರಾದ ಚಿನ್ನಯ್ಯ, ರಾಮಯ್ಯ, ಹೂವಯ್ಯ ಇದ್ದರೆ ಇನ್ನೊಂದು ಗುಂಪಿನಲ್ಲಿ ವೆಂಕಪ್ಪ ಜೋಯಿಸರು, ಶಾಮೇಗೌಡರು ಮತ್ತು ಸಿಂಗಪ್ಪಗೌಡರು ಇರುತ್ತಾರೆ. ಈ ಸಂದರ್ಭದಲ್ಲಿ ಜೋಯಿಸರ ಗುಂಪು ಸೋಲುವ ಹಾಗೆ ರಾಮಯ್ಯ ಮಾಡಿದ್ದ. ಆದರೆ ಕಾಲದ ಮಹಿಮೆಗೆ ಒಳಗಾಗಿ ಹೂವಯ್ಯನ ಸಾನಿಧ್ಯ ತಪ್ಪಿ ಪುಸ್ತಕಗಳ ಒಡನಾಟ ಕಡಿಮೆಯಾಗಿ ಆತನು ಪರಿಸ್ಥಿತಿಯ ಕೈಗೊಂಬೆಯಾಗುತ್ತಾನೆ.

ವಿಭೂತಿ, ತಾಯತ ಎಂದರೆ ನಗುತ್ತಿದ್ದ ರಾಮಯ್ಯ ಕೂಡ ಸಂಪ್ರದಾಯವಾದಿಯಾಗುತ್ತಾನೆ. ಅಲೌಕಿಕ ಶಕ್ತಿಗಳಿಗೆ ತಲೆಬಾಗುತ್ತಾನೆ. ಜೋಯಿಸರ ಪ್ರತಿ ಮಾತನ್ನು ತಪ್ಪದೆ ಪಾಲಿಸುತ್ತಾನೆ. ಚಂದ್ರೇಗೌಡರ ಹಿಡಿತಕ್ಕೆ ಬರುವ ಮುಂಚೆ ರಾಮಯ್ಯನಿಗೆ ವೆಂಕಪ್ಪ ಜೋಯಿಸರು ಮೂಢನಂಬಿಕೆಯ ಪ್ರವಾದಿಯಂತೆ ಕಾಣುತ್ತಿದ್ದರು. ಆದರೆ ಈಗ ಅವರೆ ಆಸರೆಯಾಗಿದ್ದಾರೆ. ಇವನ ದೃಷ್ಟಿಯಲ್ಲಿ ಜೋಯಿಸರು ಮೇಧಾವಿಗಳು, ಪಂಡಿತರು, ಧರ್ಮಬಿರುವು ಆಗಿ ತೋರಿಬರುತ್ತಾರೆ. ಆದ್ದರಿಂದ ಸೀತೆಗೆ ದೆಯ್ಯ ಮೆಟ್ಟಿಕೊಂಡದ್ದನ್ನು ಒಪ್ಪಿಕೊಳ್ಳುತ್ತಾನೆ. ಹೀಗೆ ಅವರಲ್ಲಿ ತಲೆಮಾರುಗಳ ಅಂತರವಿದ್ದರೂ ಅವರೆಲ್ಲರ ನಂಬಿಕೆಯ ಹಿಂದೆ ಆ ಕಾಲದ ಸಮಾಜವಿದೆ. ಆ ಸಮಾಜ ಅವರಲ್ಲಿ ಪರಿವರ್ತನೆಯನ್ನುಂಟು ಮಾಡುತ್ತದೆ. ಏಕೆಂದರೆ ಯಾವುದೇ ನಂಬಿಕೆಯು ಸಾರ್ವತ್ರಿಕವಲ್ಲ. ಹಲವು ಸಂದರ್ಭದಲ್ಲಿ ಬದಲಾವಣೆಗೆ ಒಳಗಾಗಲೇ ಬೇಕು. ಹಾಗೆ ರಾಮಯ್ಯ ಕೂಡ ಬದಲಾಗಿದ್ದಾನೆ.



## ನಾಗಮ್ಮ ಮತ್ತು ಸುಬ್ಬಮ್ಮ

ನಾಗಮ್ಮನವರು ಕಾನೂರು ಸುಬ್ಬಯ್ಯ ಗೌಡರ ಹೆಂಡತಿ ಹಾಗೂ ಹೂವಯ್ಯನ ತಾಯಿ. ಚಂದ್ರಯ್ಯ ಗೌಡರ ಕುಟಿಲೋಪಾಯ ಬಲ್ಲ ಇವರಿಗೆ ತನ್ನ ಮಗನಿಗೆ ಏನಾದರೂ ಕಿರುಕುಳ ಕೊಡಬಹುದು ಎಂಬ ಆತಂಕ. ಕಾರಣ ಅವರ ಗಂಡನ ಸಾವಿಗೆ ಚಂದ್ರೇಗೌಡರೇ ಕಾರಣ

ಎಂದು ದೃಢವಾಗಿ ನಂಬಿದ್ದರು. ಅದೇ ಸಂದರ್ಭದಲ್ಲಿ ಚಂದ್ರೇಗೌಡರು ಮದುವೆಯಾಗುವ ಮೂಲಕ ಹೊಸ ಸಮಸ್ಯೆ ಸೃಷ್ಟಿ ಮಾಡುತ್ತಾರೆ. ಈ ಸನ್ನಿವೇಶದಲ್ಲಿ ನಾಗಮ್ಮನವರಿಗೆ ಮನೆ ಪಾಲಾದರೆ ಸಾಕು ಎನಿಸುತ್ತದೆ. ಇನ್ನು ಸುಬ್ಬಮ್ಮ ಚಂದ್ರೇಗೌಡರ ಎಳೆಯಪ್ರಾಯದ ಮೂರನೆಯ ಹೆಂಡತಿ. ಕಿರಿಯ ವಯಸ್ಸಿನ ಇವಳು ಹೊಸ ಬಗೆಯ ಬದುಕಿಗೆ, ಅವಿಭಕ್ತ ಕುಟುಂಬಕ್ಕೆ ಹೊಂದಿಕೊಳ್ಳಲು ಸಾಧ್ಯವಾಗದೆ ಚಡಪಡಿಸುತ್ತಾಳೆ. ಆಕೆಯ ಈಡೇರಲಾರದ ಆಸೆಗಳು, ವಯಸ್ಸಾದ ಗಂಡನ ಸಂಶಯದಿಂದ ತೊಳಲಾಡುವ ಸುಬ್ಬಮ್ಮ ಸ್ವಲ್ಪ ಪ್ರೀತಿ ವಿಶ್ವಾಸ ತೋರಿದರು ಆ ಕಡೆ ವಾಲುತ್ತಾಳೆ. ಹಾಗಾಗಿ ಸೇರೆಗಾರ ರಂಗಪ್ಪ ಸೆಟ್ಟಿಯ ಲೈಂಗಿಕ ವಾಂಛೆಗೆ ಬಲಿಯಾಗುತ್ತಾಳೆ. ಕಡೆಗೆ ತನ್ನ ತಪ್ಪಿನ ಅರಿವಾಗುವ ಸಮಯಕ್ಕೆ ತಿರುಗಿ ಬಾರದಷ್ಟು ದೂರಕ್ಕೆ ಹೋಗಿರುತ್ತಾಳೆ.

ನಾಗಮ್ಮ ಮತ್ತು ಸುಬ್ಬಮ್ಮ ಅನಿವಾರ್ಯವಾಗಿ ಒಂದೇ ಸೂರಿನ ಕೆಳಗೆ ಬದುಕಬೇಕಾದ ಅನಿವಾರ್ಯ ಉಂಟಾಗುತ್ತದೆ. ಇವರಿಬ್ಬರು ಆರ್ಥಿಕವಾಗಿ, ಸಾಮಾಜಿಕವಾಗಿ, ಸಾಂಸ್ಕೃತಿಕವಾಗಿ ಪರಸ್ಪರ ವಿರುದ್ಧ ಧೃವಗಳು ಹಾಗೂ ವಯಸ್ಸಿನಲ್ಲಿಯು ಅಜಗಜಾಂತರ ವ್ಯತ್ಯಾಸ ಹೊಂದಿದ್ದರು. ಸುಬ್ಬಮ್ಮ ನಾಗಮ್ಮನವರಿಗೆ ಗೌರವ ಕೊಡುವುದಾಗಲೀ, ಸಲಹೆ ಕೇಳುವುದಾಗಲೀ ಮಾಡುತ್ತಿರಲಿಲ್ಲ. ಬದಲಾಗಿ ಅವರ ಮೇಲೆ ತನ್ನ ದರ್ಪವನ್ನು ತೋರಿಸುತ್ತಿದ್ದಳು. ಹೀಗಾಗಿ ಚಂದ್ರೇಗೌಡರ ಅಡಿಗೆ ಮನೆ ಸಣ್ಣ ಕುರುಕ್ಷೇತ್ರವಾಗಿರುತ್ತಿತ್ತು. ಸುಬ್ಬಮ್ಮ ಇತರೆಯವರನ್ನು ಹೆದರಿಸಿಕೊಂಡು ಕಾಲಹಾಕುತ್ತಾಳೆ. ಇವರಿಬ್ಬರ ನಡುವಿನ ಅಂತರಕ್ಕೆ ಹಲವು ಅಂಶಗಳು ಕಾರಣವಾಗುತ್ತದೆ. ಅವುಗಳೆಂದರೆ,

ಸುಬ್ಬಮ್ಮ ಬಡತನದಲ್ಲಿ ಹುಟ್ಟಿ ಬೆಳೆದವಳು. ಅನಾಗರೀಕವಾಗಿ ತನ್ನ ಬಾಲ್ಯವನ್ನು ಕಳೆದವಳು. ಅವಳು ಶ್ರೀಮಂತರನ್ನು ಮದುವೆಯಾದ ಮೇಲೆ ನಿರ್ದಾಕ್ಷಿಣ್ಯವಾಗಿ ವರ್ತಿಸುತ್ತಾಳೆ. ಪ್ರತಿಯೊಂದರಲ್ಲಿಯೂ ತನ್ನ ಸಣ್ಣ ಬುದ್ಧಿಯ ಪ್ರದರ್ಶನ ಮಾಡುತ್ತಾಳೆ. ನಾಗಮ್ಮನವರಿಗೆ ಈ ಕಾಡುರಾಣಿಯ ಆಳ್ವಿಕೆ ಸರಿಬೀಳುವುದಿಲ್ಲ. ಅವರೇನು ಅನಾಗರೀಕ ವರ್ತನೆಯವರಲ್ಲ. ಸುಸಂಸ್ಕೃತರು, ಉದಾರ ಹೃದಯಿಗಳು, ಇನ್ನೊಬ್ಬರ ಕಷ್ಟ ಸುಖಗಳಿಗೆ ಸ್ಪಂದಿಸುವವರು. ಮನೆಯ ಎಲ್ಲಾ ಸದಸ್ಯರನ್ನು ಒಂದೇ ರೀತಿ ನೋಡುವವರು. ರಾಮಯ್ಯ, ಪುಟ್ಟಮ್ಮ, ವಾಸು ಎಲ್ಲಾರನ್ನೂ ತಮ್ಮ ಮಕ್ಕಳೆಂದೆ ನೋಡಿದವರು. ಆದರೆ ಸುಬ್ಬಮ್ಮ ಹಾಗಲ್ಲ. ನಮ್ಮೆಲ್ಲರ ನಡತೆಯನ್ನು ನಾವು ಬೆಳೆಯುವ ಪರಿಸರ ನಿರ್ದೇಶಿಸುತ್ತದೆ ಎಂಬುದಕ್ಕೆ ಈ ಎರಡು ಪಾತ್ರಗಳು ಸಾಕ್ಷಿಯಾಗುತ್ತವೆ. ಇದರೊಂದಿಗೆ ಬದಲಾವಣೆಗೂ ಆ ಪರಿಸರವೇ ಕಾರಣವಾಗುತ್ತದೆ. ನಾಗಮ್ಮ ಮತ್ತು ಅವರಿಗಿಂತ ಚಿಕ್ಕವಯಸ್ಸಿನ ಸುಬ್ಬಮ್ಮ ಇಬ್ಬರು ಮದ್ಯಪಾನ ಮಾಡುವುದು ಕಂಡುಬರುತ್ತದೆ. ಇಬ್ಬರಿಗೂ ಹೇಳುವವರು, ಕೇಳುವವರು ಇದ್ದರು ಕೂಡ ಈ ಚಟದಿಂದ ಮುಕ್ತಗೊಳಿಸಲು ಸಾಧ್ಯವಾಗುವುದೇ ಇಲ್ಲ. ಕಾದಂಬರಿಕಾರರು ಸುಬ್ಬಮ್ಮಳ ಸಾಮಾಜಿಕ ಪರಿಸ್ಥಿತಿಯನ್ನು ಈ ರೀತಿ ವಿವರಿಸುತ್ತಾರೆ.

"ಸುಬ್ಬಮ್ಮ ಕಾನೂರಿನಲ್ಲಿ ಏಕಾಕಿನಿಯಂತಿದ್ದಳು. ನಾಗಮ್ಮ, ಪುಟ್ಟಮ್ಮ ವಾಸು ಮತ್ತು ಅಲ್ಲಿಗೆ ಬರುತ್ತಿದ್ದ ಇತರ ಬಂಧುಗಳು ಎಲ್ಲರೂ ಸಂಸ್ಕೃತಿಯ ದೃಷ್ಟಿಯಿಂದ ಅವಳಿಗೆ ಬಹುದೂರದವರಾಗಿದ್ದರು, ಪರಕೀಯರಾಗಿದ್ದರು. ಆದ್ದರಿಂದ ಅವರ ಮಟ್ಟಕ್ಕೇರಿ ಮಾತುಕತೆಯಾಡಲೂ ಅವಳಿಂದ ಆಗುತ್ತಿರಲಿಲ್ಲ. ಬೈಗುಳದಲ್ಲಿ ಮಾತ್ರವೇ ಅವಳು ಎಲ್ಲರಿಗಿಂತಲೂ ಹೆಚ್ಚು ಜಯಶಾಲಿಯಾಗಿದ್ದಳು" ಎಂದಿದ್ದಾರೆ {ಕಾನೂರು ಹೆಗ್ಗಡತಿ ಪು.ಸಂಖ್ಯೆ.138}

ನಾಗಮ್ಮ ಸುಬ್ಬಮ್ಮಳಿಗಿಂತ ಜ್ಞಾನ, ವಿವೇಕದಲ್ಲಿ ಮುಂಚೂಣಿಯಲ್ಲಿದ್ದರು. ಆದರೆ ಸುಬ್ಬಮ್ಮ ಬಹಳ ಮುಗ್ದೆ. ಅವಳಿಗೆ ಯಾರಲ್ಲೂ ಧೂರ್ತತನ ಕಾಣದು. ತನ್ನ ಗಂಡ ಮತ್ತು ಗಂಗೆಯ ಸಂಬಂಧದ ಬಗ್ಗೆ ನಾಗಮ್ಮ ಹೇಳಿದರೂ ಅದನ್ನು ಹೊಟ್ಟೆ ಕಿಚ್ಚಿಗೆ ಹೇಳುತ್ತಾರೆಂದು ಊಹಿಸಿ ನಂಬಲಿಲ್ಲ. ಪ್ರಾರಂಭದಲ್ಲಿ ಎಂದೂ ಕೂಡ ನಾಗಮ್ಮನವರನ್ನು ವಿಶ್ವಾಸದಿಂದ ನೋಡಲೇ ಇಲ್ಲ. ಆದರೆ ಕೊನೆಯಲ್ಲಿ ತನ್ನ ತಪ್ಪಿನ ಅರಿವಾಗಿ ಕೆಳಕಾನೂರಿನಲ್ಲಿದ್ದ ಅವರೊಡನೆ ಸಂಪರ್ಕದಲ್ಲಿರುತ್ತಾಳೆ. ಒಟ್ಟಾರೆ ಸಾಮಾಜಿಕವಾಗಿ ಗುಣ ನಡತೆ, ಸಂಸ್ಕೃತಿಯ ವಿಚಾರದಲ್ಲಿ ಎರಡು ವಿರುದ್ಧ ದಿಕ್ಕಿನಂತಿದ್ದ ಈ ಇಬ್ಬರು ಮಹಿಳೆಯರು ಜೀವನಾನುಭವ ಕಲಿಸಿದ ಪಾಠದಿಂದಾಗಿ ಸುಬ್ಬಮ್ಮಳಲ್ಲಿ ಬದಲಾವಣೆ ಕಂಡುಬರುತ್ತದೆ.

ನಾಗಮ್ಮ ಹುಟ್ಟಿನಿಂದಲೇ ಶ್ರೀಮಂತರು. ವಿವಾಹವಾದ ಮೇಲೆಯೂ ಹಾಗೆಯೇ. ಆದ್ದರಿಂದ ಒಡವೆ, ವಸ್ತ್ರ, ಹಣ ಇವುಗಳ ಮೇಲೆ ಅತಿಯಾದ ವ್ಯಾಮೋಹವಿಲ್ಲ. ಇದಕ್ಕೆ ವಿರುದ್ಧವಾದ ಪರಿಸ್ಥಿತಿ ಸುಬ್ಬಮ್ಮಳದು. ಇದರಿಂದ ಚಂದ್ರೇಗೌಡರು ಈ ದೌರ್ಬಲ್ಯವನ್ನು ಬಳಸಿಕೊಂಡು ಅವಳಿಗೆ ಅಮಿಷ ಒಡ್ಡಿ ತನ್ನ ಕಡೆ ಒಲಿಸಿಕೊಳ್ಳುವ ಪ್ರಯತ್ನ ಮಾಡುತ್ತಾರೆ. ಅವಳ ಈ ಗುಣವೆ ಅವನತಿಗೂ ಕಾರಣವಾಗುತ್ತದೆ. ಕಾನೂರಿನ ಮನೆಗೆ ಬಂದ ಮೇಲೆ ಅಲ್ಲಿನ ವಸ್ತು, ಪದಾರ್ಥಗಳನ್ನು ನೋಡಿ ಬೆರಗಾಗುತ್ತಾಳೆ. ಅದಕ್ಕಾಗಿ ಅವುಗಳನ್ನು ಬೇಕಾಬಿಟ್ಟಿ ಇಡದೆ ಕಲುಬಿಗಳೊಳಗೆ ಹಾಕಿ ಬೀಗ ಹಾಕುವ ಸಂಪ್ರದಾಯ ಪ್ರಾರಂಭಿಸುತ್ತಾಳೆ. ಈ ಎಲ್ಲಾ ಬೆಳವಣಿಗೆಯನ್ನು ನಾಗಮ್ಮ ಬಹಳ ಜಿಗುಪ್ಸೆಯಿಂದಲೇ ಗಮನಿಸುತ್ತಾರೆ. ಅವರು ಅಸಹಾಯಕರಾಗಿರುತ್ತಾರೆ. ಪರಿಣಾಮವಾಗಿ ಬರಿ ವೀಕ್ಷಣೆ ಅವರ ಕಾಯಕವಾಗಿರುತ್ತದೆ.

ಸುಬ್ಬಮ್ಮಳ ಮತ್ತೊಂದು ಹವ್ಯಾಸ ಎಂದರೆ ತನ್ನನ್ನು ಎಲ್ಲಾರೂ ಶ್ರೀಮಂತಳು ಎಂದು ಗುರುತಿಸಬೇಕು ಎಂಬುದು. ಹಾಗಾಗಿ ಓಬಯ್ಯನ ಪ್ರಕರಣ ನಡೆಯುತ್ತದೆ. ಸುಬ್ಬಮ್ಮಳ ಪರಿಸ್ಥಿತಿ ಎಂತಹದ್ದು ಎಂದರೆ 100 ರೂಪಾಯಿಯ ನೋಟನ್ನು ನೋಡಿದವಳಲ್ಲ. ಆದರೆ ಒಂದು ಹಂತದಲ್ಲಿ ಏನು ವ್ಯವಹಾರ ಜ್ಞಾನವಿರದ ಸುಬ್ಬಮ್ಮ ತನ್ನ ಗಂಡನ ಮರಣಾ ನಂತರ ಅವಳಿಗೆ ಹೊಸ ಸಾಹಸದ ಹುರುಪು ಉಂಟಾಯಿತು. ತಾನೂ ಕಾನುರು ಮನೆಗೆ ಸರ್ವಾಧಿಕಾರಿಣಿಯಾದ ಹೆಗ್ಗಡತಿ ಎಂಬುದನ್ನು ಕೇಳಿ ಹೊಸ ಪಟ್ಟ ಸಿಕ್ಕಿದಂತೆ ಉತ್ಸಾಹಗೊಂಡಳು. ಸೇರೆಗಾರರ ಸಹಾಯದಿಂದ ಕಾನೂರು ಹೆಗ್ಗಡತಿಯಾಗಿ ಎಲ್ಲಾರ ಗೌರವ ಪ್ರಶಂಸೆಗೆ ಪಾತ್ರಳಾಗುತ್ತೇನೆಂದೂ ನಿರ್ಧರಿಸುತ್ತಾಳೆ. ಹಾಗೆಯೇ ಅಡುಗೆ ಮನೆಯಿಂದ ಹಿಡಿದು ತೋಟ,

ಹಿತ್ತಲು, ಕೊಟ್ಟಿಗೆ, ಹಾಡ್ಯ, ಕಬ್ಬಿನಗದ್ದೆ ಎಲ್ಲೆಡೆಯಲ್ಲಿಯೂ ಇದ್ದು ಮೇಲ್ವಿಚಾರಣೆ ನೋಡಿಕೊಳ್ಳುತ್ತಿದ್ದಳು. ಆಕೆಗೆ ಸಾವಿರ ಕಣ್ಣಾಗಿತ್ತು. ಅದನ್ನು ಕಂಡು ಎಲ್ಲರಿಗೂ ಆಶ್ಚರ್ಯವಾಗುತ್ತಿತ್ತು. ಒಟ್ಟಾರೆ ಹೇಗಿದ್ದ ಸುಬ್ಬಮ್ಮ ಹೇಗಾದಳು ನೋಡಿ ಎನ್ನಬಹುದೇನೋ.

## ಕೌಟುಂಬಿಕ ಪರಿವರ್ತನೆ

ಕಾನೂರು ಹೆಗ್ಗಡತಿ ಕಾದಂಬರಿಯಲ್ಲಿ ಹಲವು ಕುಟುಂಬಗಳ ಪರಿಚಯವಿದೆ. ಚಂದ್ರೇಗೌಡರ, ಶಾಮಯ್ಯಗೌಡರ, ಸಿಂಗಪ್ಪ ಗೌಡರಂತಹ ಶ್ರೀಮಂತ ಒಕ್ಕಲಿಗ ಕುಟುಂಬಗಳು ಒಂದೆಡೆಯಾದರೆ ಅಣ್ಣಯ್ಯಗೌಡರಂತಹ ಬಡ ಒಕ್ಕಲಿಗ ಕುಟುಂಬವು ಇದೆ. ದಕ್ಷಿಣ ಕನ್ನಡದ ರಂಗಪ್ಪಸೆಟ್ಟಿಯ ಕುಟುಂಬ. ವೆಂಕಪ್ಪ ಜೋಯಿಸರಂತಹ ಬ್ರಾಹ್ಮಣ ಕುಟುಂಬದ ಪರಿಚಯದೊಂದಿಗೆ ಪರಿಶಿಷ್ಟ ಜಾತಿ, ವರ್ಗದವರ ಕುಟುಂಬಗಳು ಇವೆ. ಇವೆಲ್ಲದರ ವಾಸದ ಮನೆಗಳನ್ನು ಬೇರೆ ಬೇರೆ ಹೆಸರುಗಳಿಂದಲೇ ಗುರುತಿಸುತ್ತಿದ್ದರು. ಆ ಹೆಸರುಗಳು ಜಾತಿ ಸೂಚಕವಾಗಿರುತ್ತಿದ್ದವು. ಇಂತಹ ಕುಟುಂಬಗಳಲ್ಲಿ ಇಂದು ಆಧುನಿಕತೆಯ ಗಾಳಿ ಬೀಸುತ್ತಿದೆ. ಪರಿಣಾಮವಾಗಿ ಕೌಟಂಬಿಕ ಪರಿವರ್ತನೆಗಳು ಕಂಡುಬರುತ್ತಿವೆ.

ಈ ಕುಟುಂಬಗಳು ತಮ್ಮ ಸ್ಥಿರತೆಯನ್ನು ಕಾಯ್ದುಕೊಳ್ಳಲಾಗದೇ ನಿರಂತರವಾದ ಬದಲಾವಣೆಗೆ ಒಳಗಾಗುತ್ತಿವೆ. ಸಾಂಪ್ರದಾಯಿಕ ಕುಟುಂಬಗಳು ತಮ್ಮೆಲ್ಲ ಆಚಾರ ವಿಚಾರಗಳಿಂದ ಮುಕ್ತವಾಗಿವೆ. ಅವಿಭಕ್ತ ಕುಟುಂಬಗಳು ವಿಭಕ್ತ ಕುಟುಂಬಗಳಾಗಿ ಬದಲಾಗಿವೆ. ವಿಭಕ್ತ ಕುಟುಂಬಗಳು ಔದ್ಯೋಗಿಕ ಕುಟುಂಬಗಳಾಗಿ ಪರಿವರ್ತನೆಗೊಳ್ಳುತ್ತಿವೆ. ಕುಟುಂಬ ಏರ್ಪಡಿಸುತ್ತಿರುವ ವೈವಾಹಿಕ ಸಂಬಂಧಗಳು ತಮ್ಮ ರೂಪವನ್ನು ಬದಲಿಸಿಕೊಳ್ಳುತ್ತಿವೆ. ಆಧುನಿಕ ಕಾಲದಲ್ಲಿ ಕುಟುಂಬಗಳು ಹಲವಾರು ಕಾರಣಗಳಿಂದ ವಿಫಲಗೊಳ್ಳುತ್ತಿವೆ. ಅಂದರೆ ವಸಾಹತುಶಾಹಿ ನೀತಿ, ಔದ್ಯೋಗಿಕ ಕ್ರಾಂತಿ, ಜನರ ವಲಸೆ, ಪುರೋಹಿತಶಾಹಿ ದೋರಣೆಗಳು ಇದಕ್ಕೆ ಕಾರಣವಾಗಿ ಕಂಡು ಬರುತ್ತವೆ. ಈ ಕಾದಂಬರಿಯಲ್ಲಿ ಬರುವ ಕುಟುಂಬಗಳು ಮೊದಲಿನಿಂದ ಕೊನೆಯವರೆಗೂ ಸ್ಥಿರವಾಗಿಲ್ಲ. ಅವು ಬದಲಾವಣೆಗೆ ಒಳಗಾಗಿವೆ. ಪ್ರಾರಂಭದಲ್ಲಿ ಒಕ್ಕಲಿಗ ಬಡ ಕುಟುಂಬವನ್ನು ಗಮನಿಸಿದರೆ ಅದರಲ್ಲಾಗುವ ಬದಲಾವಣೆ (ಅಣ್ಣಯ್ಯ ಗೌಡರದು) ಕೊನೆಗೆ ಓಬಯ್ಯಗೌಡ ಸಂಸಾರದ ಗೊಡವೆಗೆ ಹೋಗದೆ ಭಕ್ತಿಯಿಂದ ಹೂವಯ್ಯನ ಸೇವೆ ಮಾಡಿಕೊಂಡು ಇರುತ್ತಾನೆ.

ಜನಪ್ರಿಯ ಕಾನೂರು ಕುಟುಂಬ ಬದಲಾವಣೆಯ ಬಿರುಗಾಳಿಗೆ ತತ್ತರಿಸಿಹೋಗುತ್ತವೆ. ಚಂದ್ರೇಗೌಡರ ನಾವಿಕತನದಲ್ಲಿ ಮುಂದುವರೆಯುತ್ತಿದ್ದ ನಾವೆ ನಂತರ ಹೆಗ್ಗಡತಿಯ ಆಡಳಿತದಲ್ಲಿ ಬದಲಾವಣೆಗೆ ಒಳಗಾಗುತ್ತದೆ. ಅವಳ ದುರಂತ ಅಂತ್ಯದೊಡನೆ ಈ ಕುಟುಂಬದ ಮತ್ತೊಂದು ಅಧ್ಯಾಯ ಮುಗಿಯುತ್ತದೆ. ನಂತರ ಹೊಸ ತಲೆಮಾರಿನ ಸದಸ್ಯರಾಗಿ ವಾಸಪ್ಪಗೌಡನ ನೇತೃತ್ವದಲ್ಲಿ ಮುಂದುವರೆಯುತ್ತದೆ. ಹಾಗೆಯೇ ನಾಗಮ್ಮನವರ ಕುಟುಂಬವು ಮನೆಯ 'ಹಿಸ್ಸೆ ' ಆದ ಮೇಲೆ ಕೆಳಕಾನೂರಿಗೆ ಬಂದು ನೆಲೆ ನಿಲ್ಲುತ್ತಾರೆ. ಹೂವಯ್ಯ ತನ್ನ ಲೌಕಿಕವಾದ

ಆಸೆ ಆಕಾಂಕ್ಷೆಗಳನ್ನು ಪೂರ್ಣವಾಗಿ ಬಿಡಲು ಆಗದೆ ಉಳಿಸಿಕೊಂಡು ಹೋಗಲು ಆಗದೆ ಮಧ್ಯಂತರದ ಜೀವನ ಮಾಡುತ್ತಾನೆ. ತಾಯಿಯ ಮರಣಾನಂತರ ಅವನಲ್ಲಿ ಬಾರಿ ಬದಲಾವಣೆಯಾಗುತ್ತದೆ. ಶಾಮಯ್ಯ ಗೌಡ ಮತ್ತು ಸಿಂಗಪ್ಪಗೌಡರ ಕುಟುಂಬದಲ್ಲಿಯೂ ಆಧುನಿಕತೆಯ ಗಾಳಿ ಬೀಸುತ್ತದೆ. ಅವರ ಮನಸ್ಸು ಆಧುನಿಕತೆಗೆ ತೆರೆದುಕೊಳ್ಳುತ್ತದೆ. ಅದರ ಪರಿಣಾಮವಾಗಿ ಸೀತೆ ಹೂವಯ್ಯನೊಂದಿಗೆ ವಿವಾಹವಾಗದೆ ಒಂದೇ ಮನೆಯಲ್ಲಿ ವಾಸಿಸುತ್ತಿದ್ದರು ಯಾವುದೇ ಚಕಾರ ಎತ್ತದೆ ಸುಮ್ಮನಿರುತ್ತಾರೆ.

ವೆಂಕಪ್ಪ ಜೋಯಿಸರಲ್ಲಿಯೂ ಕ್ರಮೇಣ ಬದಲಾವಣೆ ಕಂಡುಬರುತ್ತದೆ. ಮೊದಲ ರೀತಿಯಲ್ಲಿ ಆದಾಯದ ಮೂಲವನ್ನು ಕಂಡುಕೊಳ್ಳಲು ಸಾಧ್ಯವಾಗುವುದಿಲ್ಲ. ಜನರು ಕೂಡ ಖಾಯಿಲೆ, ರೋಗ ಬಂದರೆ ಜೋಯಿಸರಲ್ಲಿಗೆ ಹೋಗದೇ ವೈದ್ಯರಲ್ಲಿಗೆ ಹೋಗಲು ಪ್ರಾರಂಭಿಸುತ್ತಾರೆ. ಅವರ ಉದ್ಯೋಗ ಕೇವಲ ಪೂಜೆ ಪುನಸ್ಕಾರಗಳಿಗೆ ಮೀಸಲಾಗುತ್ತದೆ. ಹಿಂದೆ ಮಡಿ ಮೈಲಿಗೆ ಎಂದು ತಮ್ಮ ಮಕ್ಕಳನ್ನು ಶೂದ್ರ ಮಕ್ಕಳೊಂದಿಗೆ ಆಡಲು ಬಿಡದ ಇದೆ ಜೋಯಿಸರ ಮಕ್ಕಳು ಇತರ ಮಕ್ಕಳೊಂದಿಗೆ ಕಲೆತು ಆಡುತ್ತಿದ್ದರೆ ವೆಂಕಪ್ಪ ಜೋಯಿಸರ ಎರಡು ಮಕ್ಕಳು ವಾಸುವಿನ ಸಹಪಾಠಿಗಳಾಗಿದ್ದರು. ಅವರು ಶೂದ್ರರ ಸಮಾರಂಭದಲ್ಲಿ ಪಾಲ್ಗೊಳ್ಳುತ್ತಾರೆ. ಇದಕ್ಕೆ ಶಿಕ್ಷಣ ಮತ್ತು ಸಮಾಜದ ಪ್ರಭಾವ ಕಾರಣವಾಗುತ್ತದೆ.

ಒಟ್ಟಾರೆ ಸಮಾಜದಲ್ಲಿ ಆದ ಕೈಗಾರಿಕೀಕರಣ, ನಗರೀಕರಣ, ಪ್ರಜಾಸತ್ತಾತ್ಮಕ ಆದರ್ಶಗಳು ಹಾಗೂ ಮೌಲ್ಯಗಳ ಪ್ರಭಾವ, ಧಾರ್ಮಿಕ ನಂಬಿಕೆಗಳು ಮತ್ತು ನೈತಿಕ ನಿಯಮಗಳ ಪ್ರಭಾವದ ಕುಗ್ಗುವಿಕೆ ಹಾಗೂ ಲೌಕಿಕ ಮನೋಭಾವದ ವ್ಯಾಪಕ ಪ್ರಸಾರ, ವ್ಯಕ್ತಿವಾದದ ಸ್ಫೂರ್ತಿ ಮತ್ತು ರಮ್ಯ ಪ್ರೇಮದ ಪರಿಣಾಮ ಶಿಕ್ಷಣದ ಪ್ರಸಾರ ಹಾಗೂ ಪ್ರಭಾವ ಅದೆಲ್ಲದರೊಂದಿಗೆ ಸರ್ಕಾರಿ ಶಾಸನಗಳ ಪ್ರಭಾವವು ಕುಟುಂಬದಲ್ಲಿ ಪರಿವರ್ತನೆಯನ್ನುಂಟು ಮಾಡಿತು.

## ಕುಟುಂಬದ ಸಂಸ್ಕೃತಿಗಳು

ಪ್ರಪಂಚದ ಯಾವುದೇ ಭಾಗದ ಕುಟುಂಬಗಳನ್ನು ಪರಿಶೀಲಿಸಿದರೂ ಅವರದೇ ಆದ ಸಂಸ್ಕೃತಿಗಳು ಕಂಡುಬರುತ್ತವೆ. ಆ ಜನರು ಆಚರಿಸುವ ಹಬ್ಬಗಳು, ಸಂಪ್ರದಾಯ, ನಂಬಿಕೆ, ದೇವತಾ ಕಾರ್ಯ ಎಲ್ಲವೂ ವಿಶಿಷ್ಟವಾಗಿರುತ್ತದೆ. ಈ ಕಾದಂಬರಿಯಲ್ಲಿ ಉಲ್ಲೇಖಿತ ಕುಟುಂಬ ಮಲೆನಾಡಿನ ಶ್ರೀ ವೈಷ್ಣವ ನಾಮಧಾರಿ ಕುಟುಂಬವಾಗಿದ್ದು, ಹಲವು ವಿಶಿಷ್ಟ ಆಚರಣಾ ಸಂಸ್ಕೃತಿ ಹೊಂದಿವೆ. ಅವುಗಳೆಂದರೆ,

### ಹಬ್ಬ ಹರಿದಿನಗಳು

ಈ ಹಬ್ಬ ಹರಿದಿನಗಳನ್ನು ತಮ್ಮ ಮತ ಪದ್ಧತಿಯಂತೆ ಸಂಪ್ರದಾಯ ಬದ್ಧವಾಗಿ ಆಚರಿಸುತ್ತಾರೆ. ವರ್ಷ ಪೂರ್ತಿ ರೈತಾಪಿ ಕೆಲಸವಾದ್ದರಿಂದ ಈ ಸಂದರ್ಭದಲ್ಲಿ ಸಂತೋಷದಿಂದ ಕಾಲ ಕಳೆಯುತ್ತಾರೆ. ಬಡವರು ಸಾಲ ಮಾಡಿ ಹಬ್ಬ ಆಚರಿಸುತ್ತಾರೆ. ಪ್ರತಿಯೊಂದು ಹಬ್ಬಕ್ಕೂ

ಇವರಲ್ಲಿ ಪ್ರತ್ಯೇಕವಾದ ಹಾಗೂ ವಿಶೇಷವಾದ ಅಡಿಗೆ ಮಾಡುತ್ತಾರೆ. ಈ ಸಂದರ್ಭದಲ್ಲಿ ಸಹ ಪಂಕ್ತಿ ಭೋಜನ ಇವರಲ್ಲಿರುತ್ತದೆ. ಇವರ ವರ್ಷದ ಮೊದಲ ಹಬ್ಬ ಪ್ರಾರಂಭವಾಗುವುದು ಬಸವನ ಅಮವಾಸ್ಯೆಯಿಂದ. ಈ ಹಬ್ಬದ ವಿಶೇಷವಾಗಿ ಬರಿ ಹೊಟ್ಟೆಗೆ ಬೆಳಗ್ಗೆ ಹಾಳೆ ಮರದ ಸಿಪ್ಪೆ, ಬೆಳ್ಳುಳ್ಳಿ, ಕಾಳು ಮೆಣಸು ಇದರಿಂದ ಮಾಡಿದ ಕಷಾಯ ಸೇವಿಸುತ್ತಾರೆ. ಇಲ್ಲಿಂದ ಶ್ರಾವಣ ಮಾಸ ಆರಂಭ. ಇದು ಈ ಒಕ್ಕಲಿಗ ಜನಾಂಗಕ್ಕೆ ಬಹಳ ಶ್ರೇಷ್ಠವಾದ ಮಾಸ. ಆದ್ದರಿಂದ ಶ್ರದ್ಧಾ ಭಕ್ತಿ ಮತ್ತು ಸ್ವಚ್ಚತೆಯಿಂದ ಆಚರಿಸುತ್ತಾರೆ.

ಗಣೇಶನ ಹಬ್ಬ, ಮಖೆಮಳೆ ಹಬ್ಬ, ಪಿತೃಪಕ್ಷ ಅಥವಾ ಮಾಹಾಲಯ, ಭೂಮಿ ಹುಣ್ಣಿಮೆ ಹಬ್ಬ, ದೀಪಾವಳಿ ಹಬ್ಬ, ಮೇಳ ದೇವರ ಪೂಜೆ, ಹೊಸ್ತಿನ ಮನೆ ಹಬ್ಬ, ಹರಿಸೇವೆ, ಕಣದ ಹಬ್ಬ, ಯುಗಾದಿ ಹಬ್ಬ ಇದು ಈ ಜನಾಂಗದವರು ಒಂದು ವರ್ಷದ ಅವಧಿಯಲ್ಲಿ ಆಚರಿಸುವ ಹಲವು ಹಬ್ಬ ಹರಿದಿನಗಳು. ಒಟ್ಟಾರೆ ಮಲೆನಾಡಿನಲ್ಲಿ ಕಂಡು ಬರುವ ಈ ಕುಟುಂಬಗಳ ಸಂಸ್ಕೃತಿಯಲ್ಲಿ ಹಬ್ಬದ ಆಚರಣೆಗಳು ಪ್ರಮುಖ ಪಾತ್ರ ವಹಿಸುತ್ತವೆ. ಕಾರಣ ಆ ಕಾಲದಲ್ಲಿ ಜನರಿಗೆ ಸಮಯ ಕಳೆಯಲು ಯಾವುದೇ ಮನೋರಂಜನೆ ಇರಲಿಲ್ಲ. ಆದ್ದರಿಂದ ಇಂತಹ ಸಂದರ್ಭವನ್ನು ಸಂತೋಷದಿಂದ ಆಚರಿಸುತ್ತಿದ್ದರು. ಹಾಗಾಗಿ ಬಡವ ಬಲ್ಲಿದ ಎಂಬ ಬೇದ ಭಾವವಿಲ್ಲದೆ ಎಲ್ಲಾರೂ ಹಬ್ಬದ ಬರುವಿಕೆಗಾಗಿ ಹಾತೊರೆಯುತ್ತಿದ್ದರು. ಆದ್ದರಿಂದ ಒಂದೊಂದು ಹಬ್ಬಕ್ಕೂ ಒಂದೊಂದು ಕಾರಣ ಹಾಗೂ ವಿಶೇಷತೆಗಳಿರುವುದು ಕಂಡು ಬರುತ್ತದೆ.

**ಧಾರ್ಮಿಕ ಜೀವನ**

ಸಂಸ್ಕೃತಿ ಎಂದರೆ ಜೀವನದ ರೀತಿ ಎಂದು ಅರ್ಥೈಸಲಾಗುತ್ತದೆ. ಕುಟುಂಬದ ಸಂಸ್ಕೃತಿ ಎಂದಾಗ ಆ ಕುಟುಂಬದಲ್ಲಿನ ಜೀವನ ಕ್ರಮವನ್ನು ವಿಶ್ಲೇಷಿಸುತ್ತಾರೆ. ಆ ಕುಟುಂಬದ ಧಾರ್ಮಿಕ ಜೀವನ, ಸಂಸ್ಕೃತಿ, ಸಂಪ್ರದಾಯ, ಕ್ರಿಯಾ ವಿಧಿಗಳನ್ನು ಉಲ್ಲೇಖಿಸುತ್ತಾರೆ. ಇದು ಅವರ ಸಾಮಾಜಿಕ ಬದುಕಿನ ಪ್ರತಿಬಿಂಬದಂತೆ ಕಾಣುತ್ತದೆ.

> "ಮಾನವನ ವಿಕಾಸದ ಚರಿತ್ರೆಯಲ್ಲಿ ಧರ್ಮದ ಸೇರ್ಪಡೆಯು ಆತನ ಲೌಕಿಕ, ಅಲೌಕಿಕ ಆಚರಣೆ ಚಿಂತನೆ, ವರ್ತನೆಗಳನ್ನು ರೂಪಿಸಿ ನಿಯಂತ್ರಿಸಿ ಸಂಸ್ಕಾರ ನೀಡಿದ್ದರಿಂದ ಅದೊಂದು ಬಹು ಮುಖ್ಯವಾದ ಘಟ್ಟವೆನಿಸುತ್ತದೆ. ಒಂದು ಧರ್ಮದ ಕಲ್ಪನೆ ಯಾವಾಗಲೂ ಮೂರ್ತವಾಗಿ 'ಇದೆ' ಮತ್ತು 'ಇಷ್ಟೆ' ಎಂಬ ಖಚಿತತೆ ಇರುವುದಿಲ್ಲ. ಆದರೆ ಅದು ತನ್ನ ಆಶಯ ಆದರ್ಶ ಬೋಧನೆಯ ತತ್ವ ಪ್ರಣಾಳಿಕೆಯಿಂದ ತಾತ್ವಿಕ ಸ್ಥರದಲ್ಲಿ ಪ್ರಕಟವಾಗಬಲ್ಲದು. ಇನ್ನೊಂದು ಕಡೆ ಧಾರ್ಮಿಕ ಆಚರಣೆ, ಅನುಕರಣೆಗಳಿಂದ ಕ್ರಿಯಾತ್ಮಕ ಸ್ತರದಲ್ಲಿ ಕಾಣಿಸಿಕೊಳ್ಳಬಹುದು". {ಕುವೆಂಪು ಕಾದಂಬರಿಗಳ ಸಾಂಸ್ಕೃತಿಕ ಅಧ್ಯಯನ, ಡಾ॥ಗುರುಪಾದ ಮಾರಿಗುದ್ಧಿ}

**ನಂಬಿಕೆ ಮತ್ತು ಕ್ರಿಯಾವಿಧಿಗಳು :**

ಈ ಕಾದಂಬರಿಯಲ್ಲಿ ಜನರ ಹಲವಾರು ನಂಬಿಕೆಗಳು ವ್ಯಕ್ತಗೊಳ್ಳುತ್ತವೆ. ಆ ಜನರ ನಂಬಿಕೆ, ಸ್ವಭಾವ ಮತ್ತು ವರ್ತನೆಗಳಿಗೆ ಹಿನ್ನಲೆಯು ಕಂಡು ಬರುತ್ತದೆ. ಜನರ ಇಷ್ಟಾನಿಷ್ಟಗಳು, ಕ್ರಿಯಾವಿಧಿಗಳ ಬಗ್ಗೆಯಾಗಿರಬಹುದು. ಈ ಎಲ್ಲಾ ಅಂಶಗಳ ಬಗ್ಗೆ ಸ್ಪಷ್ಟ ಮಾಹಿತಿಗಳು ಲಭ್ಯವಾಗುತ್ತದೆ. ಕೆಲವು ನಂಬಿಕೆಗಳು ಬೇರೆಯವರ ದೃಷ್ಠಿಯಲ್ಲಿ ನಿರರ್ಥಕ, ಅನಗತ್ಯ ಎನಿಸಬಹುದು. ಆದರೆ ಆ ನಂಬಿಕೆಗಳಿಗೆ ಹಿನ್ನಲೆಯಿಲ್ಲದಿದ್ದರೆ ಅದು ಬೆಳೆದು ಬರುವುದಿಲ್ಲ. ಉದಾಹರಣೆಗೆ ಬಾಣಂತಿಯರ ಕೋಣೆಗೆ ಕೈ ಕಾಲು ತೊಳೆದುಕೊಂಡು ಪ್ರವೇಶಿಸಬೇಕು ಎಂಬ ನಂಬಿಕೆ ಇದೆ. ಇದೊಂದು ಆರೋಗ್ಯದ ದೃಷ್ಠಿಯಲ್ಲಿನ ನಂಬಿಕೆ. ಇಲ್ಲದಿದ್ದರೆ ಆ ಎಳೆಯ ದೇಹಗಳಿಗೆ ಅನಾರೋಗ್ಯವಾಗಬಹುದೆಂದು ಇದನ್ನು ಪ್ರತಿಯೊಬ್ಬರು ಆಚರಿಸುತ್ತಾರೆ. ಸಾಮಾಜಿಕ ಸ್ವಾಸ್ಥ್ಯವನ್ನು ಕಾಪಾಡುವ ಉದ್ದೇಶದಿಂದ ವ್ಯಕ್ತಿಗಳಿಗೆ, ಮಿತಿ, ಮೇರೆಗಳನ್ನು ಸೃಷ್ಠಿಸುವ ಸಲುವಾಗಿ ಇವುಗಳು ಹುಟ್ಟಿಕೊಂಡಿದೆ. ನಂಬಿಕೆಗಳು ಎಷ್ಟೇ ಭಿನ್ನವಾಗಿದ್ದರೂ ಅವು ಜನರ ಜೀವನ ಕ್ರಮದ ಹಿಂದಿನ ಆಶಯ ಅಭಿರುಚಿಗಳನ್ನು ತಿಳಸುತ್ತವೆ.

ಮಲೆನಾಡಿನ ಜನರಲ್ಲಿ ಪ್ರತಿಯೊಂದು ಕಾರ್ಯಕ್ರಮಗಳಿಗೂ ನಿರ್ದಿಷ್ಟ ಕ್ರಿಯಾವಿಧಿಗಳಿವೆ. ಜನರ ಆಹಾರ ಉಪಯೋಗಿಸುವ ಕ್ರಮಕ್ಕೆ, ಬಟ್ಟೆ ಧರಿಸುವುದಕ್ಕೆ, ಹರಕೆ ತೀರಿಸುವುದಕ್ಕೆ, ಹಬ್ಬ ಹುಣ್ಣಿಮೆ ಆಚರಿಸಲು, ವ್ಯಕ್ತಿ ಹುಟ್ಟಿದಾಗ, ಸತ್ತಾಗ ಹೀಗೆ ಪ್ರತಿಯೊಂದು ಆಚರಣೆಯ ಹಿಂದೆಯೂ ಕ್ರಮಗಳಿರುತ್ತವೆ. ಉದಾಹರಣೆಗೆ ಕಾದಂಬರಿಯಲ್ಲಿ ಬರುವ ಹರಕೆಯ ಸನ್ನಿವೇಶ ತೆಗೆದೊಂಡರೆ ಅದಕ್ಕೆ ಪೂರ್ವ ವಿಧಿಯಾಗಿ ಹಲವು ಕಾರ್ಯಕ್ರಮ ಇರುವುದು ಗಮನಾರ್ಹ. ಹಾಗೆಯೇ ಆ ಸಂದರ್ಭದಲ್ಲಿ ಸಂಬಂಧಪಟ್ಟವರು ನಿರ್ಧಿಷ್ಠಪಡಿಸಿದ ರೀತಿಯಲ್ಲಿಯೇ ನಡೆದುಕೊಳ್ಳಬೇಕು. ಒಟ್ಟಾರೆ ಕುಟುಂಬದ ಸಂಸ್ಕೃತಿ ಎಂದರೆ ಆ ಕುಟುಂಬದಲ್ಲಿ ಆಚರಣೆಯಲ್ಲಿರುವ ಪ್ರತಿ ಸಂದರ್ಭವನ್ನು ವಿವರಿಸುವಂತಹದು. ಕುಟುಂಬದ ಸಂಸ್ಕೃತಿ ಎಂದರೆ ಆ ಕುಟುಂಬದಲ್ಲಿರುವ ಆಚರಣೆಗಳು, ಪದ್ದತಿಗಳು, ಕ್ರಿಯಾವಿಧಿಗಳು, ಹಬ್ಬ ಹರಿದಿನಗಳನ್ನು ಉಲ್ಲೇಖಿಸುವುದು ಸೂಕ್ತ ಎಂದು ಕಂಡುಬರುತ್ತದೆ. ಈ ಕಾದಂಬರಿಯಲ್ಲಿ ಬರುವ ಹಲವು ಕುಟುಂಬಗಳು ತಮ್ಮದೆ ಜೀವನದ ಶೈಲಿಯಿಂದಾಗಿ ಬೇರೆ ಕುಟುಂಬಗಳಿಗಿಂತ ಭಿನ್ನವಾಗಿವೆ.

# ಅಧ್ಯಾಯ ೬

## ಮಲೆನಾಡಿನ ಶ್ರೀ ವೈಷ್ಣವ ನಾಮಧಾರಿ ಗೌಡ ಸಂಸ್ಕೃತಿಯ ಕುಟುಂಬ

ಮಾನವ ಸಮಾಜದ ಇತಿಹಾಸದಲ್ಲಿ ಅವನು ನಿರ್ಮಿಸಿಕೊಂಡ ಮೊದಲನೆಯ ಸಂಘ ಎಂದರೆ ಕುಟುಂಬ. ಪ್ರಾಚೀನ ಕಾಲದಲ್ಲಿ ಇವು ವ್ಯವಸ್ಥಿತವಾಗಿ ಸಂಘಟಿತಗೊಂಡು ಶಾಶ್ವತತೆಯ ಲಕ್ಷಣಗಳನ್ನು ಹೊಂದಿರಲಿಲ್ಲವಾದರೂ ಕ್ರಮೇಣವಾಗಿ ವ್ಯಕ್ತಿಯ ಜೈವಿಕ ಮತ್ತು ಮಾನಸಿಕ ಅವಶ್ಯಕತೆಗಳನ್ನು ಈಡೇರಿಸುತ್ತಾ ಸುವ್ಯವಸ್ಥಿತವಾಗಿ ಬೆಳೆದು ಬಂದು ಸಮಾಜದ ಮೂಲ ಘಟಕಗಳಾಗಿವೆ. ಕುಟುಂಬಗಳ ನಿರ್ಮಾಣದಿಂದಲೇ ಮಾನವ ಸಮಾಜ ಅರ್ಥಪೂರ್ಣವೆನಿಸಿದೆ. ಪ್ರತಿಯೊಂದು ಮಾನವ ಸಮಾಜಕ್ಕೂ ಕುಟುಂಬ ಕೇಂದ್ರ ಬಿಂದು. ಪ್ರಪಂಚದಾದ್ಯಂತ ಕುಟುಂಬ ಮಾನವನ ಸಮುದಾಯಗಳಲ್ಲಿ ಪ್ರತಿಯೊಂದು ಸಮೂಹ ಸಂಘಟನೆಗೆ ಅವಶ್ಯಕವಾದ ಘಟಕಗಳಾಗಿವೆ. ಇವು ಯಾವುದೇ ಮಾದರಿಯಲ್ಲಿ ಬೆಳೆದು ಬಂದರೂ ಮಾನವನ ಜೈವಿಕ, ಸಾಮಾಜಿಕ ಮತ್ತು ಭಾವನಾತ್ಮಕ ಆಸೆಗಳನ್ನು ಪೂರೈಸಲು ಸದಾ ಪ್ರಯತ್ನಿಸುತ್ತದೆ. ಕುಟುಂಬ ಒಂದು ಸಾರ್ವತ್ರಿಕವಾದ ಸಂಸ್ಥೆ. ಪ್ರತಿಯೊಂದು ಕುಟುಂಬವು ತನ್ನದೆ ಆದ ವಿಶೇಷತೆಯನ್ನು ಹೊಂದಿರುತ್ತದೆ.

ಕುಟುಂಬ ಎಂದರೆ ಸದಸ್ಯರೆಲ್ಲರೂ ಒಂದೇ ಮನೆಯಲ್ಲಿದ್ದು ಒಂದು ಸಾಮಾನ್ಯ ದೇವತೆಯಲ್ಲಿ ನಂಬಿಕೆಯನ್ನಿಟ್ಟು ಹಾಗೂ ತಮ್ಮ ಪೂರ್ವಜರಲ್ಲಿ ಶ್ರದ್ಧೆಯನ್ನಿಟ್ಟು ಕೆಲವು ಸಾಮಾನ್ಯ ಕೌಟಂಬಿಕ ಆದರ್ಶಗಳನ್ನು ಹಾಗೂ ಮೌಲ್ಯಗಳನ್ನು ಸಂಪೋಷಿಸಿಕೊಂಡು ತಮ್ಮೆಲ್ಲರ ಸಾಮಾನ್ಯ ಆಸ್ತಿಯನ್ನು ಸಮಾನವಾಗಿ ಅನುಭೋಗಿಸುತ್ತಾ ತಮ್ಮ ದುಖಃ ದುಮ್ಮಾನಗಳನ್ನು ಮತ್ತು ಸುಖ ಸಂತೃಪ್ತಿಗಳನ್ನು ಪರಸ್ಪರ ಹಂಚಿಕೊಂಡು ಒಟ್ಟಿಗೆ ವಾಸಿಸುವ ಜನ ಸಮೂಹ ಎಂದು ಅರ್ಥೈಸಬಹುದು.

ಇಂತಹ ಕುಟುಂಬಗಳು ಆಯಾ ಪ್ರದೇಶಕ್ಕೆ ಮತ್ತು ಜಾತಿಗಳಿಗೆ ಅನುಗುಣವಾಗಿ ವಿವಿಧ ರೀತಿಯ ಮನೆಗಳ ರಚನೆ, ಆಹಾರ ಪದಾರ್ಥಗಳ ಸೇವನೆಯ ಹವ್ಯಾಸ ಬೆಳೆಸಿಕೊಂಡಿರುತ್ತಾರೆ. ಅಂತಹ ಆಹಾರಗಳನ್ನು ತಯಾರಿಸುವುದಕ್ಕಾಗಿ ಭಿನ್ನ ರೀತಿಯ ಪಾತ್ರೆಗಳನ್ನು ತಯಾರಿಸಿಕೊಂಡಿರುತ್ತಾರೆ. ಇವುಗಳು ಆ ಪ್ರದೇಶಕ್ಕೆ ಮಾತ್ರ ಸೀಮಿತವಾಗಿರಬಹುದು. ಅಥವಾ ಅಲ್ಪ ಮಾರ್ಪಾಡಿನೊಂದಿಗೆ ಬೇರೆ ಪ್ರದೇಶದಲ್ಲಿಯೂ ಕಂಡು ಬರಬಹುದು.

ಕಾನೂರು ಹೆಗ್ಗಡತಿ ಕಾದಂಬರಿಯಲ್ಲಿ ಬರುವ ಕುಟುಂಬಗಳು ಮಲೆನಾಡಿನ ಶ್ರೀ ವೈಷ್ಣವ ನಾಮಧಾರಿ ಗೌಡ ಸಂಸ್ಕೃತಿಯ ಕುಟುಂಬಗಳು. ಇವರು ಶಾಖಾಹಾರಿಗಳು. ಇವರ

ರೀತಿ ರಿವಾಜುಗಳು, ಪಾತ್ರೆಗಳು, ಬಳಸುವ ಸಾಮಾಗ್ರಿಗಳು, ಪೂಜೆ, ಹರಕೆ, ವಿಧಿವಿಧಾನಗಳೆಲ್ಲವೂ ಬೇರೆಯೆ. ಮಾಂಸಾಹಾರ ಸೇವನೆ ಮಾಡುತ್ತಾರೆ ಎಂದ ಮಾತ್ರಕ್ಕೆ ಆಚಾರ ವಿಚಾರ ಇಲ್ಲ ಎಂದಲ್ಲ. ಅದಕ್ಕೆ ಅನುಗುಣವಾಗಿಯೇ ಅವರ ಮನೆಯ ರಚನೆಯಾಗಿರುತ್ತದೆ. ಮಾಂಸಾಹಾರ ತಯಾರಿಸಲು ಬಳಸುವ ಪಾತ್ರೆಗಳು, ಒಲೆಗಳು ಎಲ್ಲಾ ಪ್ರತ್ಯೇಕ. ಸಾಮಾಜಿಕವಾಗಿ ಶೂದ್ರವರ್ಗಕ್ಕೆ ಸೇರಿದ್ದರು ಇವರಲ್ಲಿಯೂ ಮಡಿ ಮೈಲಿಗೆ ಎಂಬ ಪರಿಕಲ್ಪನೆ ಇದೆ. ಹಾಗಾಗಿ ಈ ಸಂದರ್ಭದಲ್ಲಿ ಬ್ರಾಹ್ಮಣ ಕುಟುಂಬ ಮತ್ತು ಒಕ್ಕಲಿಗ ಕುಟುಂಬದ ಮನೆಯ ರಚನೆಯನ್ನು ಈ ಕೆಳಗಂಡಂತಿದೆ. ಈ ಎರಡು ಕುಟುಂಬಗಳ ರಚನೆಯು ಅವರ ಆಚಾರ, ವಿಚಾರಗಳಿಗೆ ಅನುಗುಣವಾಗಿಯೇ ಕಟ್ಟಿಸಿಕೊಂಡಿರುತ್ತಾರೆ.

## ಮನೆಯ ರಚನೆ

ಪ್ರಾರಂಭದಲ್ಲಿ ಬ್ರಾಹ್ಮಣ ಕುಟುಂಬದ ಮನೆಯ ರಚನೆಯನ್ನು ತೆಗೆದುಕೊಳ್ಳೋಣ. ಹಿಂದಿನ ಕಾಲದ ಬ್ರಾಹ್ಮಣ ಮನೆಯ ವಿನ್ಯಾಸದಲ್ಲಿ ಮೂರು ಆವರಣಗಳಿರುತ್ತಿದ್ದವು. ಅವುಗಳನ್ನು ತಮ್ಮ ನಿರ್ಧಿಷ್ಟ ಉಪಯೋಗಕ್ಕೆ ಅನುಗುಣವಾಗಿ ಬಳಸಿಕೊಳ್ಳುತ್ತಿದ್ದರು. ಅದರಲ್ಲಿ ಮೊದಲನೆಯದು,

**ಹೊರಗಿನ ಆವರಣ :** ಇದು ಮನೆಯ ಮುಂಬಾಗಿಲಿನಲ್ಲಿ ಪ್ರಾರಂಭವಾಗಿ ವಾಸ್ತು ಬಾಗಿಲವರೆಗೆ ಇರುತ್ತದೆ. ಇದನ್ನು ಶೂದ್ರ ಆವರಣ ಎಂತಲು ಕರೆಯುತ್ತಾರೆ. ಇಲ್ಲಿ ಸ್ವಜಾತಿಗೆ ಸಂಬಂಧ ಪಡೆದವರು ಬಂದು ಹೋಗುವ ಸ್ಥಳ. ಅನ್ಯ ಜಾತಿಯೊಂದಿಗೆ ವ್ಯವಹಾರ ಮಾಡಲು ಇದನ್ನು ಬಳಸುತ್ತಾರೆ. ಇಲ್ಲಿರುವ ಪ್ರತಿ ವಸ್ತುವಿಗೂ ಮಡಿ ಎಂಬುದು ಇರುವುದಿಲ್ಲ. ಪ್ರತಿನಿತ್ಯದಂತೆ ಸ್ವಚ್ಛ ಮಾಡುತ್ತಾರೆ. ಆದರೆ ಮನೆಯ ಸದಸ್ಯರು ಮಡಿಯಲ್ಲಿರುವಾಗ ಈ ಸ್ಥಳದಲ್ಲಿರುವ ವಸ್ತುಗಳನ್ನು ಮುಟ್ಟುವುದಿಲ್ಲ.

**ಮಧ್ಯ ಆವರಣ :** ಇದು ಮನೆಯ ಎರಡನೆಯ ಹಂತ. ವಾಸ್ತು ಬಾಗಿಲಿನಿಂದ ಪ್ರಾರಂಭವಾಗುತ್ತದೆ. ಈ ಭಾಗದಲ್ಲಿ ಆಚಾರ, ವಿಚಾರ, ಊಟ, ಉಪಚಾರಗಳು ನಡೆಯುತ್ತವೆ. ಇಲ್ಲಿ ಸ್ವಜಾತಿ ಬಾಂಧವರಿಗೆ ಮಾತ್ರ ಪ್ರವೇಶ. ಸ್ವಜಾತಿಯವರಲ್ಲಿಯು ಮೈಲಿಗೆಯಾದವರು ಪ್ರವೇಶಿಸುವುದಿಲ್ಲ. ಈ ಭಾಗಕ್ಕೆ ಬಂದಾಗ ಅವರ ವಸ್ತ್ರಗಳನ್ನು ಬದಲಾಯಿಸಿಕೊಳ್ಳಬೇಕು. ಒಂದೊಮ್ಮೆ ಯಾರಾದರೂ ಶೂದ್ರರ ಪ್ರವೇಶ ಅಥವಾ ಮೈಲಿಗೆಯಾದವರ ಪ್ರವೇಶವಾದರೆ ಆ ಭಾಗವನ್ನು ಪಂಚಗವ್ಯಗಳಿಂದ ಶುದ್ಧಮಾಡಬೇಕಾಗುತ್ತದೆ.

**ಶುದ್ಧ ಆವರಣ :** ಇದು ಮನೆಯ ಮುಖ್ಯ ಭಾಗ. ಬ್ರಾಹ್ಮಣ ಕುಟುಂಬದಲ್ಲಿ ಈ ಆವರಣಕ್ಕೆ ವಿಶೇಷವಾದ ಪ್ರಾಮುಖ್ಯತೆ ಇದೆ. ಈ ಭಾಗಕ್ಕೆ ಪ್ರವೇಶಿಸಬೇಕಾದರೆ ಶುದ್ದಾಚಾರಬೇಕು. ಸ್ನಾನ ಮಾಡಿಯೇ ಪ್ರವೇಶಿಸಬೇಕು ಇಲ್ಲದಿದ್ದರೆ ಕೈಕಾಲು ಆದರೂ ತೊಳೆದೆ ಪ್ರವೇಶ ಮಾಡಬೇಕು. ಹಾಗೂ ಹೊರಗಿನ ಬಟ್ಟೆಯನ್ನು ತೆಗೆದು ಈ ಕೋಣೆಗೆ ಬಳಸುವ ವಸ್ತ್ರವನ್ನೆ ಬಳಸಬೇಕು.

ಇದನ್ನು ಪೂಜಾ ಕೋಣೆಯೆಂದು ಕರೆಯುತ್ತಾರೆ. ಹಾಗೆಯೆ ಅನುಷ್ಠಾನ ಭಾಗ ಅಥವಾ ಕೋಣೆಯೆಂದು ಕರೆಯುತ್ತಾರೆ. ಮನೆಯ ಸದಸ್ಯರು ಸಹ ಶುದ್ಧಾಚಾರ ಇಲ್ಲದೆ ಪ್ರವೇಶಿಸುವುದಿಲ್ಲ. ಹೀಗೆ ಬ್ರಾಹ್ಮಣ ಕುಟುಂಬದ ಮನೆಯ ಮೂರು ಭಾಗಗಳು ಒಂದೊಂದು ಕೆಲಸಕ್ಕೆ ಮೀಸಲಾಗಿರುತ್ತದೆ. ಅದಕ್ಕೆ ಅದರದೇ ಆದ ಪ್ರಾಮುಖ್ಯತೆ ಇದೆ.

ಇನ್ನು ಒಕ್ಕಲಿಗ ಕುಟುಂಬದ ಮನೆಯ ರಚನೆಯನ್ನು ತೆಗೆದುಕೊಂಡರೆ ಅದು ಇನ್ನೂ ಭಿನ್ನವಾಗಿರುತ್ತದೆ. ಮಲೆನಾಡಿನ ಮನೆಗಳು ಭೀಮಾ ಗಾತ್ರದಲ್ಲಿರುತ್ತವೆ. ಆದರೆ ಶ್ರೀಮಂತ ಒಕ್ಕಲಿಗ ಮನೆಗಳು ಗಾತ್ರದಲ್ಲಿ ದೊಡ್ಡದಿದ್ದರು ಬಡವರಾದ ಒಕ್ಕಲಿಗರ ಮನೆಗಳು ಅಷ್ಟೊಂದು ದೊಡ್ಡದಾಗಿರುವುದಿಲ್ಲ. ಇದರಲ್ಲಿ ಎರಡು ಅಂಕಣ, ಮೂರು ಅಂಕಣ ಎಂದು ಇರುತ್ತಿದ್ದವು. ಅದರೊಂದಿಗೆ ಮನೆಗೆ ಹೊಂದಿಕೊಂಡಂತೆ ಕಡಿಮಾಡು ಎಂದು ಕರೆಸಿಕೊಳ್ಳುವ ಭಾಗವಿದ್ದು ಅದರಲ್ಲಿ ಮಾಂಸಾಹಾರ ಬೇಯಿಸುವುದು ತಿನ್ನುವುದು ನಡೆಯುತ್ತದೆ. ಒಂದೊಂದು ಮನೆಯಲ್ಲು ಮೂವತ್ತು ನಲ್ವತ್ತು ಮಂದಿ ನಿರಾತಂಕವಾಗಿ ಇರಬಹುದು. ಒಂದೊಂದು ಕಂಬಗಳು ಕೂಡ ಒಂದೊಂದು ಮರವಿದ್ದ ಹಾಗೆ ಇರುತ್ತಿದ್ದು ಅದರಲ್ಲಿ ಕೆತ್ತನೆಗಳು ಇರುತ್ತಿದ್ದವು. ಬಾಣಂತಿಯರಿಗೆ ಪ್ರತ್ಯೇಕ ಕೊಠಡಿ, ಮೈಲಿಗೆಯಾದವರಿಗೆ ಸೂತಕದ ಕೊಟ್ಟಿಗೆ ಎಂದು ಪ್ರತ್ಯೇಕವಾದ ಸ್ಥಳಗಳಿರುತ್ತಿದ್ದವು. ಮನೆಯ ಮುಂದೆ ತುಳಸಿ ಕಟ್ಟೆಯಿದ್ದು ಪ್ರತಿ ಶನಿವಾರ, ಸೋಮವಾರ ವಿಶೇಷ ಪೂಜೆ ಮಾಡುತ್ತಿದ್ದರು. ಪ್ರತಿ ಮನೆಯಲ್ಲು ಸಾಕು ಪ್ರಾಣಿಗಳನ್ನು ಸಾಕಲು ಸ್ಥಳಗಳಿದ್ದು, ಹಂದಿ ಸಾಕುವ ಸ್ಥಳವನ್ನು ದೊಡ್ಡಿ ಎಂದು, ಕೋಳಿ ಸಾಕುವ ಸ್ಥಳವನ್ನು ಕೋಳಿ ಒಡ್ಡು ಎಂದು, ದನ, ಎಮ್ಮೆ ಸಾಕುವ ಸ್ಥಳವನ್ನು ಕೊಟ್ಟಿಗೆ ಎಂದು ಕರೆಯುತ್ತಿದ್ದರು. ಪ್ರತಿ ಮನೆಯಲ್ಲು ಈ ಎಲ್ಲಾ ಸ್ಥಳ ಕಡ್ಡಾಯವಾಗಿ ಇದ್ದೆ ಇರುತ್ತದೆ.

## ಅಡಿಗೆ ಮನೆ

ಪ್ರತಿ ಮನೆಯಲ್ಲು ಈ ಕೊಠಡಿ ಇರುತ್ತದೆ. ಕುಟುಂಬ ಎಂದೊಡನೆ ಸದಸ್ಯರ ನೆನಪಾಗುವಂತೆ ಮನೆ ಎಂದಾಗ ಅಡಿಗೆಯ ಮನೆಯ ಚಿತ್ರಣ ಮೂಡಿಬರುತ್ತದೆ. ಕುಟುಂಬದ ಸದಸ್ಯರ ನಡುವಿನ ಸಂಬಂಧ ಸುಮಧುರವಾಗಿದ್ದಾಗ ಈ ಸ್ಥಳ ನೆಮ್ಮದಿಯ ತಾಣವಾಗಿರುತ್ತದೆ. ಇಲ್ಲದಿದ್ದರೆ ಸಂಘರ್ಷಗಳ ನೆಲೆಯಾಗುತ್ತದೆ. ಇದು ಸದಸ್ಯರ ಮನೋಭಿಲಾಷೆಯಂತೆ ಆಹಾರ ತಯಾರಿಸುವ ತಾಣ. ಆದರೆ ಸದಸ್ಯರಲ್ಲಿ ವೈಮನಸ್ಸು ಮೂಡಿದಾಗ ಮನೆಯ ವಾತಾವರಣ ಹಾಳಾಗುವುದು ಇಲ್ಲಿಂದ. ಈ ಕಾದಂಬರಿಯಲ್ಲು ಅಡಿಗೆ ಮನೆಯ ಪ್ರಸ್ತಾಪವಿದೆ. ಅದು ಪುರಾತನವಾದದ್ದು. ಸರಿಯಾದ ಗಾಳಿ ಬೆಳಕಿನ ವ್ಯವಸ್ಥೆಯಿಲ್ಲ. ಪಾತ್ರೆಗಳು ಯಾವ ಬಣ್ಣದವು. ಆಹಾರಕ್ಕೆ ಯಾವ ಬಣ್ಣ ಇದೆ. ಹೇಗಿದೆ ಎಂಬುದು ಕಾಣದಷ್ಟು ಕತ್ತಲೆ. ಸದಾ ಹಾರಾಡುವ ನೊಣಗಳು. ಇಲ್ಲಿ ಆಧುನಿಕ ಸಲಕರಣೆಗಳಿಲ್ಲ. ಸೌಲಭ್ಯಗಳಿಲ್ಲ. ಪ್ರತಿ ವಸ್ತುವು ಪುರಾತನವಾದದ್ದು. ಒಂದೊಂದು ವಸ್ತುವಿನ ಹಿಂದೆಯೂ ಒಂದೊಂದು ಇತಿಹಾಸವಿದೆ. ಆ ಅಡಿಗೆ ಮನೆಯಲ್ಲಿ ಯಾರೆ ಬಂದರೂ ಅವುಗಳೊಡನೆ ಅವಿನಾಭಾವ ಸಂಬಂಧ ಹೊಂದುತ್ತಾರೆ.

ಕಾದಂಬರಿಯಲ್ಲಿ ಅಡಿಗೆ ಮನೆಯನ್ನು ಲೇಖಕರು ಈ ರೀತಿ ವಿವರಿಸುತ್ತಾರೆ.

"ಸುತ್ತಣ ಜಗತ್ತಿಗೆಲ್ಲ ಬೆಳಗಾಗಿದ್ದರೂ ಅಡುಗೆ ಮನೆಯ ಈ ಭಾಗಕ್ಕೆ ಇನ್ನು ಮಬ್ಬು ತಪ್ಪಿರಲಿಲ್ಲ. ಏಕೆಂದರೆ ಅದಕ್ಕಿದ್ದುದು ಒಲೆಯ ಮೇಲಕ್ಕೆ ಒಂದೇ ಕಿಟಕಿ. ಆದರೂ ಪಾಕಶಾಲೆಯ ರೂಪು ರೇಶೆ ತಕ್ಕ ಮಟ್ಟಿಗೆ ಪ್ರದರ್ಶಿತವಾಗಿತ್ತು. ಬಾಗು ಮರಿಗೆ, ಉಪ್ಪಿನ ಮರಿಗೆ, ಕೈಯೊಡ್ಡುವ ಹಿತ್ತಾಳೆಯ ತಂಬಾಳೆ, ಸಿಕ್ಕದ ಮೇಲೆ ಮೆಣಸಿನ ಕಾಯಿಯ ಬುಟ್ಟಿ, ಮೊಸರು ಗಡಿಗೆ, ಮಜ್ಜಿಗೆ ಚರಿಗೆ, ಕಡೆಗೋಲು ಕಂಬ, ತುಪ್ಪ ಬೆಣ್ಣೆ ಮೊದಲಾದವುಗಳನ್ನು ಇಟ್ಟು ಬೀಗ ಹಾಕಿದ ಒಂದು ಕಲಬಿ, ಮಣೆಯ ರಾಶಿ. ಅಡುಗೆಮನೆಯ ಅಂಗವಾಗಿ ಬೆಕ್ಕು, ಅಲ್ಲಲ್ಲಿ ಹಾರಿ ಕೂರುತ್ತಿದ್ದ ಮನೆ ನೊಣಗಳು ಇತ್ಯಾದಿ., ಯಾರಾದರೂ ಪ್ರಾಕ್ತನ ವಿಮರ್ಶಕರು ಅಡುಗೆ ಮನೆಯನ್ನು ಪ್ರವೇಶಿಸಿದರೆ ಪುರಾಣ ಪ್ರಸಿದ್ಧವಾದ ಗವಿಯನ್ನೊ ಅಥವಾ ಪಾಳು ಬಿದ್ದ ದೇವಾಲಯವನ್ನೂ ಮನಸ್ಸಿಗೆ ತರುತ್ತಿತ್ತು. ಅದರ ವಾತವರಣ ಅಷ್ಟೊಂದು ಪೂರ್ವಿಕತೆಯಿಂದ ತುಂಬಿಕೊಂಡಿತು. {ಕಾನೂರು ಹೆಗ್ಗಡತಿ, ಪುಟ ಸಂಖ್ಯೆ 55}

ಇದು ಬಹುತೇಕ ಎಲ್ಲಾ ಮಲೆನಾಡಿನ ಮನೆಗಳ ಅಡಿಗೆ ಮನೆಯ ಚಿತ್ರಣ. ಆದರೆ ಇಂದು ಆಧುನಿಕ, ಸ್ವಚ್ಛ, ಗಾಳಿ ಬೆಳಕಿನ ವ್ಯವಸ್ಥೆಯ, ನೈರ್ಮಲ್ಯ ಪರಿಸ್ಥಿತಿಯಲ್ಲಿ, ಕ್ರಿಮಿ ಕೀಟಗಳಿಂದ ಮುಕ್ತವಾದ ಸ್ಥಳದಲ್ಲಿ ಆಹಾರ ಬೇಯಿಸುವುದು ಇಂದಿನ ಕಲ್ಪನೆ. ಕಾರಣ ಆರೋಗ್ಯಪೂರ್ಣ ದೇಹಕ್ಕೆ, ಆರೋಗ್ಯದಾಯಕ ಆಹಾರ ಬೇಕು. ಅದು ಸ್ವಚ್ಛ ಸ್ಥಳದಲ್ಲಿ ಮಾಡಿರಬೇಕು. ಆಗ ಪರಿಪೂರ್ಣ ದೇಹದಿಂದಾಗಿ ಮನಸ್ಸು ಶಾಂತವಾಗಿರುತ್ತದೆ. ಯಾವುದೇ ಕೆಟ್ಟ ಆಲೋಚನೆಗಳಿಗೆ ಅವಕಾಶವಾಗದಂತೆ ಇರುತ್ತದೆ. ಆದ್ರೆ ಕಾದಂಬರಿಯಲ್ಲಿ ಬರುವ ಮನೆಯಲ್ಲಿ ಈ ಯಾವ ಲಕ್ಷಣವು ಇರುವುದಿಲ್ಲ ಯಾರ ಮನಸ್ಸನ್ನು, ಭಾವನೆಯನ್ನು ಅರಿಯಲಾರದ ವಾತವರಣ ಅಲ್ಲದೆ ಕಾದಂಬರಿಯಲ್ಲಿ ಸಂಘರ್ಷ ಪ್ರಾರಂಭವಾಗುವ ಸ್ಥಳವು ಇದೆ. ಇಲ್ಲಿಂದ ಪ್ರಾರಂಭವಾದದ್ದು ಮನೆ ಪಾಲಾಗುವರೆಗೂ ಮುಂದುವರಿಯುತ್ತದೆ. ಚಂದ್ರೇಗೌಡರ ಅಡಿಗೆ ಮನೆಯಲ್ಲಾದ ಬದಲಾವಣೆ ಸುಬ್ಬಮ್ಮನ ಅಲ್ಪತನವನ್ನು ಎತ್ತಿ ತೋರುತ್ತದೆ.

ಒಟ್ಟಾರೆ ಚಂದ್ರಯ್ಯ ಗೌಡರ ಅಡುಗೆ ಮನೆ ಎಂದರೆ ಅದೊಂದು ಮಿನಿ ವಸ್ತು ಸಂಗ್ರಾಹಲಯ ಇದ್ದಂತೆ. ಅಲ್ಲಿ ಏನುಂಟು ಏನಿಲ್ಲ ಎಂದು ಹೇಳುವ ಹಾಗಿಲ್ಲ. ಹೆಂಡತಿಯ ಮೇಲಿನ ದಬ್ಬಾಳಿಕೆ, ದೌರ್ಜನ್ಯ ಇದೆ. ಯಜಮಾನಿ ಮತ್ತು ಕೈ ಕೆಳಗಿನವರು ಎಂಬ ಭಾವನೆ ಇದೆ. ಆಹಾರ ಪದಾರ್ಥಗಳ ಸಂಗ್ರಹದೊಂದಿಗೆ ಅದನ್ನು ಯಾರು ಹೇಗೆ ಬಳಸಬೇಕೆಂಬ ಬಗ್ಗೆ ಅವರದೇ ಆದ ಚಿಂತನೆ ನಿರ್ಧಾರಗಳಿವೆ. ಆದ್ದರಿಂದ ಅದೊಂದು ವಿಸ್ಮಯಗಳ ತಾಣ.

## ಕಡೆಗೋಲು ಕಂಬ



ಇದು ಮೊಸರಿನಿಂದ ಬೆಣ್ಣೆಯನ್ನು ತೆಗೆಯುವ ಸಾಧನ. ಗ್ರಾಮೀಣ ಜನರೆ ತಯಾರಿಸಿಕೊಂಡ ಸರಳ ಯಂತ್ರ. ಪ್ರತಿ ಮಲೆನಾಡಿನ ಮನೆಯಲ್ಲು ಕಾಣ ಸಿಗುತ್ತದೆ. ಮಲೆನಾಡಿನ ಅಡಿಗೆ ಮನೆಯಲ್ಲಿ ಯಾವುದೇ ಯಂತ್ರಗಳು ಇಲ್ಲದೆ ಇರುವ ಸಂದರ್ಭದಲ್ಲಿ ಕಾನೂರು ಮನೆಯಲ್ಲಿ ಕಡೆಗೋಲು ಕಂಬ ಯಾವುದೇ ಸದ್ದಿಲ್ಲದೆ ತನ್ನ ಕಾರ್ಯವನ್ನು ನಿರಂತರವಾಗಿ ನಡೆಸಿಕೊಂಡು ಬರುತ್ತಿತ್ತು. ಕಾದಂಬರಿಕಾರರು ಇದನ್ನು ಒಂದು ಮೂಕ ಸಾಕ್ಷಿಯ ಹಾಗೆ ಇಲ್ಲಿ ಚಿತ್ರಿಸಿದ್ದಾರೆ. ಅಡಿಗೆ ಮನೆಯಲ್ಲಿ ಪ್ರತಿಷ್ಠಾಪಿಸಿರುವ ಈ ಸಾಧನ ಮನೆಯ ಹೆಂಗಳೆಯರ ಮನಸ್ಸನ್ನು ಅರ್ಥ ಮಾಡಿಕೊಂಡಂತೆ ಕಾಣುತ್ತದೆ. ಯಾರೆ ತನ್ನನ್ನು ತಿರುಗಿಸಲು ಬಂದರು ಸ್ವಲ್ಪವು ಪ್ರತಿರೋಧ ತ್ತೋರದೆ ವಿನಮ್ರವಾಗಿ ಕಾರ್ಯ ನಿರ್ವಹಿಸುತ್ತಿತ್ತು. ಮಹಿಳೆಯರು ಹಾಗೆ ಅವರ ಕನಸು ನನಸುಗಳನ್ನು ಹಾಡಿನ ಮೂಲಕ ವ್ಯಕ್ತಪಡಿಸುತ್ತ ತಮ್ಮ ನೋವು ನಲಿವುಗಳನ್ನು ಅದರೊಡನೆ ಹಂಚಿಕೊಳ್ಳುತ್ತಿದ್ದರು.

ಎಲ್ಲಾವು ತಿಳಿದಿದ್ದು ಏನೂ ತಿಳಿಯದ ಹಾಗೆ ವರ್ತಿಸುತ್ತಿತ್ತು. ಅಡುಗೆ ಮನೆಯ ಆಗು ಹೋಗುಗಳನ್ನು ನೋಡುತ್ತಾ, ಏನೂ ಮಾಡಲಾಗದ ಪರಿಸ್ಥಿತಿಯಲ್ಲಿ ಅಸಹಾಯಕವಾಗಿ ನಿಂತು ನೋಡುತ್ತಿತ್ತು. ಇದನ್ನು ಕಾದಂಬರಿಕಾರರು ಈ ರೀತಿ ವಿಶ್ಲೇಷಿಸುತ್ತಾರೆ.

> "ಮೂರಡಿ ಎತ್ತರದ ಕಡೆಗೋಲು ಕಂಬವು ಶತಮಾನಗಳಿಗೆ ಸಾಕ್ಷಿಯಾಗಿ ನಿಂತಿತು. ಎಷ್ಟು ಜನ ಹೆಣ್ಣುಗಳು ಅದರ ಮುಂದೆ ಕುಳಿತು ಪ್ರಾತಃ ಕಾಲದಲ್ಲಿ ಮೊಸರು ಕಡೆದಿದ್ದಾರೆ. ಅದಕ್ಕೆ ಎಷ್ಟು ಕೋಮಲ ಕರಗಳ ಸ್ಪರ್ಶವಾಗಿದೆ. ಎಷ್ಟು ಕಂಠಗಳು, ಎಷ್ಟು ಕೋಪಗಳು, ಎಷ್ಟು ವಿಧದ ಸಂಭಾಷಣೆಗಳು, ಕ್ಷುದ್ರ ಕಲಹಗಳು ಅದಕ್ಕೆ ತಿಳಿದಿದೆ. ವಾಸುವಿನ ತಾಯಿ, ಚಂದ್ರೇ ಗೌಡರ ತಾಯಿ, ಅವರ ಅಜ್ಜನ ಅಜ್ಜನ ತಾಯಿ ಎಲ್ಲರೂ ಪರಿಚಿತರು. ಇದಕ್ಕೆ ಎಲ್ಲಿಯಾದರು ಮಾತಾಡುವ ಶಕ್ತಿ ಬಂದರೆ ಎಷ್ಟು ಗುಟ್ಟುಗಳು ರಟ್ಟಾಗುತ್ತದೆ. ಎಷ್ಟು ಸ್ನೇಹ ಪ್ರೇಮಗಳು ನುಚ್ಚು ನೂರಾಗಿ ಮಣ್ಣುಗೂಡುತ್ತದೆ. ಅದಕ್ಕೆಲ್ಲಿಯಾದರೂ ಬಾಯಿ ಬಂದರೆ ದೇವರೆ ಗತಿ, ರಾಮಾಯಣ, ಮಹಾಭಾರತಕ್ಕಿಂತ ದೊಡ್ಡ ಪುರಾಣವಾಗಿ ಹೋಗುತ್ತದೆ. ವಾಲ್ಮೀಕಿ, ವ್ಯಾಸಾದಿ ಕವಿಗಳು ನಾಚಿ ತಲೆಬಾಗ ಬೇಕಾಗುತ್ತದೆ. ಸದ್ಯಕ್ಕೆ ಅದಕ್ಕೆ ಬಾಯಿಯಿಲ್ಲ ಅಥವಾ ಇದ್ದರೂ ಇಲ್ಲದವರಂತೆ ನಟಿಸುತ್ತಿದೆ. ಆದ್ದರಿಂದ ಅವರೆಲ್ಲ ಬದುಕಿಕೊಂಡಿದ್ದಾರೆ. (ಕಾನೂರು ಹೆಗ್ಗಡತಿ ಪುಟ ಸಂಖ್ಯೆ ೮೮)

ಬಹುತೇಕ ಎಲ್ಲಾ ಮನೆಯಲ್ಲು ಈ ಕಥೆ ಇದ್ದೇ ಇರುತ್ತದೆ. ಪ್ರಮಾಣದಲ್ಲಿ ಭಿನ್ನತೆ ಇರಬಹುದು. ಕೆಲವೆಡೆ ಪ್ರೀತಿ ವಿಶ್ವಾಸ, ಇನ್ನು ಕೆಲವೆಡೆ ದ್ವೇಷ ಸಂಘರ್ಷವನ್ನು ಕಾಣುತ್ತೇವೆ. ಒಟ್ಟಾರೆ ಸದಸ್ಯರ ಮನೋಭಾವನೆಗೆ ತಕ್ಕಂತೆ ಅಡಿಗೆ ಮನೆಯ ಪರಿಸ್ಥಿತಿ ಇರುತ್ತದೆ. ಇದು ಶಾಶ್ವತವಾಗಿ ಒಂದೇ ರೀತಿ ಇರುವುದಿಲ್ಲ. ಪೀಳಿಗೆಯಿಂದ ಪೀಳಿಗೆಗೆ ಬದಲಾವಣೆಯಾಗುತ್ತದೆ. ಆದರೆ ಇದಕ್ಕೆಲ್ಲ ಕಡೆಗೋಲು ಕಂಬ ಸಾಕ್ಷಿ ಎನ್ನುವುದಂತು ನಿಜ.

## ಪಾತ್ರೆಗಳು



ಆಹಾರ ಬೇಯಿಸಲು ಮಾನವ ಕಂಡುಕೊಂಡ ಸಲಕರಣೆಗಳೆ ಪಾತ್ರೆಗಳು. ಇದನ್ನು ನಾಗರೀಕತೆಯ ಪ್ರಾರಂಭದಲ್ಲಿ ಕಲ್ಲಿನಿಂದಲೂ, ನಂತರ ಮಣ್ಣಿನಿಂದಲೂ ತಯಾರಿಸುತ್ತಿದ್ದು. ಇನ್ನು ಕೆಲವನ್ನು ಮರಗಳಿಂದಲೂ ತಯಾರಿಸಿಕೊಂಡರೆ ಲೋಹಗಳ ಪರಿಚಯ ಆದ ಮೇಲೆ ಅವುಗಳಿಂದಲೆ ಬಹುತೇಕ ಪಾತ್ರೆಗಳು ರಚನೆಗೊಳ್ಳುತ್ತಿದ್ದವು. ಕಾಲಕ್ರಮೇಣ ಸಂಸ್ಕೃತಿ ಬೆಳೆದಂತೆ ಸಂಶೋಧನೆಗಳು ಪ್ರಾರಂಭವಾಗಿ ಲೋಹಗಳು, ಮಿಶ್ರಲೋಹಗಳ ಮೂಲಕ ತನಗೆ ಬೇಕಾದ ಆಕಾರದಲ್ಲಿ ಮಾದರಿಯಲ್ಲಿ, ಗಾತ್ರದಲ್ಲಿ ತಯಾರಿಸಲು ಪ್ರಾರಂಭಿಸುತ್ತಾನೆ. ಈ ಕಾದಂಬರಿಯಲ್ಲಿಯೂ ಹಲವು ಮಾದರಿಯ ವಿವಿಧ ಮೂಲವಸ್ತುಗಳಿಂದ ತಯಾರಿಸಲ್ಪಟ್ಟ [illegible] ಗಮನಿಸಬಹುದು. [illegible] ರುಗಳಿಂದ [illegible] ಲ್ಲಿನಿಂದ [illegible] ತ್ತಿದ್ದ ಪಾತ್ರೆಯನ್ನು [illegible]

[illegible] ಸದ್ಯಕ್ಕೆ [illegible] ಮತ್ತು ಪುರಾತನ [illegible] ಸುತ್ತಿದೆ. [illegible] ಪಾತ್ರೆಯನ್ನು [illegible] ವಸ್ತುವಿನಿಂದ [illegible] ಎಲ್ಲಾ [illegible] ಕಥೆ ಇದ್ದೇ ಇದೆ. ಪ್ರಮಾ[illegible] ಲೋಹಗಳ [illegible] ಅಲ್ಲೇನಿದ್ದರೂ ಕಲ್ಲು, ಮಣ್ಣು ಮತ್ತು ಮರದಿಂದ ತಯಾರಿಸಿದ [illegible] ಮುಖ್ಯವಾಗಿತ್ತು. [illegible] ಇನ್ನೊಂದು ಗಮನಿಸಬೇಕಾದ ಅಂಶ ಎಂದರೆ ಈ ಪಾತ್ರೆಗಳು [illegible] ನ್ನು ಸೂಚಿಸುತ್ತದೆ. ಅಂದರೆ ಮಣ್ಣಿನ, ಕಲ್ಲಿನ ಮತ್ತು ಮರದ ಪಾತ್ರೆಗಳನ್ನು [illegible] ರು ಮಾತ್ರ ಬಳಸುತ್ತಿದ್ದರು. ಬ್ರಾಹ್ಮಣ ವರ್ಗದವರು ಈ ವಸ್ತುವಿನಿಂದ [illegible] ಗೆಲ್ಲ. ಅವರು ಕೇವಲ ತಾಮ್ರ, ಹಿತ್ತಾಳೆ ಮತ್ತು ತವರ [illegible] ಅದರಲ್ಲಿ ಕಂಚು ಸೇರಿದಂತೆ ಈ ಪಾತ್ರೆ ಬಳಸುತ್ತಿದ್ದರು. [illegible] ಮೈಲಿಗೆಯ [illegible] ವನ್ನು ನೀಡಿ ಶೂದ್ರರಿಂದ ಈ ಪಾತ್ರೆಗಳನ್ನು ದೂರವಾಗಿಯೇ ಇಟ್ಟಿದ್ದರು.

ಒಟ್ಟಾರೆ ಪಾತ್ರೆಗಳು ಸಮಾಜದ ಸ್ಥರವಿನ್ಯಾಸ ಸೂಚಿಸುತ್ತಿದ್ದವು. ಮನುಷ್ಯನ ಹಂತದಲ್ಲಿ ಬದಲಾವಣೆ ಆದ ಹಾಗೆ ಪಾತ್ರೆಯ ಮೂಲವಸ್ತುವಿನಲ್ಲಿಯೂ ಬದಲಾವಣೆಯಾಯಿತು. ಇಂದು ಈ ಮರ, ಕಲ್ಲು, ಮಣ್ಣುಗಳ ಪಾತ್ರೆಗಳ ಬದಲಿಗೆ ಸ್ಟೀಲ್ ಪಾತ್ರೆಗಳದ್ದೆ ಕಾರುಬಾರು. ಬಿಟ್ಟರೆ ಪ್ಲಾಸ್ಟಿಕ್ ವಸ್ತುಗಳು ಆ ಸ್ಥಳವನ್ನು ಆಕ್ರಮಿಸಿಕೊಂಡಿವೆ.

## ಬೀಸೆಕಲ್ಲು – ಕಡೆಕಲ್ಲು



ಗ್ರಾಮೀಣ ಪ್ರದೇಶದ ಜನ ತಮ್ಮ ಧಾನ್ಯಗಳನ್ನು ರವೆ ಮತ್ತು ಹಿಟ್ಟನ್ನಾಗಿ ಅರೆಯಲು ಈ ಬೀಸೆಕಲ್ಲು ಮತ್ತು ಕಡೇಕಲ್ಲು ಬಳಸುತ್ತಿದ್ದರು. ಬೀಸೆಕಲ್ಲು ಕಲ್ಲಿನ ಎರಡು ಪದರಗಳಿಂದ ರಚನೆ ಗೊಂಡಿರುತ್ತಿತ್ತು. ಅದನ್ನು ಅಡಿಕಲ್ಲು ಮತ್ತು ಮೇಲುಕಲ್ಲು ಎಂದು ಕರೆಯುತ್ತಾರೆ. ಕೆಳಕಲ್ಲಿಗೆ ಮಧ್ಯದಲ್ಲಿ ರಂಧ್ರವನ್ನು ಮಾಡಿ ಅದಕ್ಕೆ ಕಬ್ಬಿಣದ ಮೊಳೆಯನ್ನು ಜೋಡಿಸಿರುತ್ತಾರೆ. ಮೇಲಿನ ಪದರದ ಕಲ್ಲಿಗೆ ಮಧ್ಯದಲ್ಲಿ ಮೂರು ರಂಧ್ರವನ್ನು ಕೊರೆದು, ಧಾನ್ಯಗಳನ್ನು ಹಾಕಲು ಅನುಕೂಲವಾಗುವಂತೆ ಅದನ್ನು ಕೆತ್ತಲಾಗಿರುತ್ತದೆ. ಅದನ್ನು ತಿರುಗಿಸಲು ಮೇಲ್ಭಾಗದ ಪದರದ ಕಲ್ಲಿಗೆ ಮರದ ಹಿಡಿಯನ್ನು (ಮರದ ಗೂಟ) ಹಾಕಿರುತ್ತಾರೆ. ಕೆಲವು ಕಲ್ಲುಗಳು ಬಹಳ ಭಾರವಾಗಿದ್ದು ಇಬ್ಬಿಬ್ಬರು ಹೆಂಗಸರು ಸೇರಿ ತಿರುಗಿಸಬೇಕಾಗುತ್ತಿತ್ತು. ಈ ಕಲ್ಲುಗಳು ಮಹಿಳೆಯರ ಜೀವನದ ಅವಿಭಾಜ್ಯ ಅಂಗವಾಗಿರುತ್ತಿದ್ದವು. ಕಲ್ಲು ಎಂದಿದ್ದರು ಅದು ಕಲ್ಲೆ. ಅದು ಮೃದು ಹೃದಯಿ ಆಗಲಾರದು. ಹೆಂಗಸರು ಬೆಳಗಿನ ಜಾವದಲ್ಲಿ ಎದ್ದು ಈ ಬೀಸೆಕಲ್ಲಿನ ಮುಂದೆ ಧಾನ್ಯವನ್ನಿಟ್ಟುಕೊಂಡು ಬೀಸಲು ತೊಡಗುತ್ತಾರೆ. ಹೀಗೆ ಬೀಸುವಾಗ ಅವರು ತಮ್ಮ ನೋವು, ನಲಿವು, ಸಂಕಟ, ದುಃಖ, ದುಮ್ಮಾನಗಳನ್ನು ಹಾಡಿನ ರೂಪದಲ್ಲಿ ಹಾಡಿಕೊಳ್ಳುತ್ತಾ ಬೀಸುತ್ತಾರೆ. ಇದು ಪೀಳಿಗೆಯಿಂದ ಪೀಳಿಗೆಗೆ ನಿರಂತರವಾಗಿ ಮುಂದುವರೆದು ಅದನ್ನು ಬೀಸೆ ಕಲ್ಲಿನ ಪದ ಎಂದು ಕರೆಯಲು ಪ್ರಾರಂಭವಾಯಿತು.

ವಿವಾಹಿತ ಹೆಣ್ಣು ತನ್ನ ಗಂಡನ ಮನೆಗೆ ಬರುವಾಗ ತನ್ನವರೆಲ್ಲರನ್ನು ಬಿಟ್ಟು ಬಂದಿರುತ್ತಾಳೆ. ಈ ಸಮಯದಲ್ಲಿ ಗಂಡನ ಮನೆಯವರು ಅವಳನ್ನು ಅನುಸರಿಸಿಕೊಂಡು ಹೋದರೆ ಅವಳಿಗೆ ಸುಖ ಇಲ್ಲದಿದ್ದರೆ ಅವಳ ಬದುಕು ನರಕವಾಗುತ್ತಿತ್ತು. ಅಂತಹ ಸಂದರ್ಭದಲ್ಲಿ ಆಕೆಯ ನೋವು, ಸಂಕಟವನ್ನು ಕೇಳುವ ವಸ್ತು ಎಂದರೆ ಈ ಬೀಸೆಕಲ್ಲು. ಅದರ ಮುಂದೆ ತನ್ನೆಲ್ಲ ನೋವುಗಳನ್ನು ಹೇಳಿಕೊಂಡು ಹಗುರಾಗುವಳು.

ಇದೇ ರೀತಿಯ ಇನ್ನೊಂದು ಕಲ್ಲು ಕಡೇಕಲ್ಲು, ಇದನ್ನು ದ್ರವರೂಪದ ವಸ್ತುಗಳನ್ನು ಅರೆಯಲು ಬಳಸುತ್ತಿದ್ದರು. ಸಾಮಾನ್ಯವಾಗಿ ಖಾರ ರುಬ್ಬಲು ಮತ್ತು ಅಕ್ಕಿಯನ್ನು ರುಬ್ಬಲು ಬಳಸುತ್ತಾರೆ. ಪ್ರಸ್ತುತ ಕಾದಂಬರಿಯಲ್ಲಿಯು ಈ ಕಲ್ಲುಗಳ ಉಲ್ಲೇಖವಿದೆ. ಸಾಮಾನ್ಯವಾಗಿ ಮಲೆನಾಡಿನ ಈ ಸೀಮೆಯಲ್ಲಿ ಒಂದು ಮನೆಗೆ ಒಂದೇ ಕಡೆಕಲ್ಲು ಮತ್ತು ಬೀಸೆಕಲ್ಲು ಎಂಬ ಆಚಾರವಿದೆ. ಈ ಕಾದಂಬರಿಯಲ್ಲಿ ಮನೆಯ ಸ್ಥಿರ ಚರ ವಸ್ತುಗಳನ್ನು ಹಿಸ್ಸೆ ಮಾಡುವಾಗ ಹಳೆಯ ಪೊರಕೆಯನ್ನು ಕೂಡ ಉಲ್ಲೇಖಿಸಿರುವುದು ಗಮನಾರ್ಹ. ಆದರೆ ಈ ಎರಡು ಕಲ್ಲುಗಳ ಬಗ್ಗೆ ಮಾಹಿತಿ ನೀಡಿಲ್ಲ. ಒಂದೊಮ್ಮೆ ಆ ಬಗ್ಗೆಯೂ ವಿಷಯ ಪ್ರಸ್ತಾಪವಿದ್ದಿದ್ದರೆ ಮನೆ ಪಾಲಾಗುವಾಗ ಯಾವ ನಿರ್ಧಾರಕ್ಕೆ ಬರುತ್ತಿದ್ದರು ಎಂದು ತಿಳಿಯಲು ಸಹಾಯಕವಾಗುತ್ತಿತ್ತು.

## ಒಲೆಗಳು



ಮನುಷ್ಯ ಆಹಾರವನ್ನು ಬೇಯಿಸಿ ತಿನ್ನಲು ಪ್ರಾರಂಭಿಸಿದ ದಿನದಿಂದ ಇಂದಿನವರೆಗೂ ಆಹಾರವನ್ನು ಬೇಯಿಸುವ ಕ್ರಮದಲ್ಲಿ ಒಂದು ಕ್ರಾಂತಿಯೆ ನಡೆದಿದೆ. ಪ್ರಾರಂಭದ ದಿನಗಳಲ್ಲಿ ಈ ನವೀನ ಮಾದರಿಯ ಸಾಧನೆಗಳ ಉಪಯೋಗ ಇರಲಿಲ್ಲ. 20ನೇ ಶತಮಾನದ ಪ್ರಾರಂಭದಲ್ಲಿಯೂ ಮಲೆನಾಡಿನ ಭಾಗಗಳಲ್ಲಿ ಆಧುನಿಕವಾದ ಆಹಾರ ಬೇಯಿಸುವ ಯಾವುದೇ ಸಾಧನ ಇರಲಿಲ್ಲ. ಆದರೆ ಆಹಾರವನ್ನು ಬೇಯಿಸಿ ತಿನ್ನುವ ಅನಿವಾರ್ಯವಿತ್ತು. ಅದಕ್ಕಾಗಿ ಉಪಯೋಗಕ್ಕೆ ಬಂದ ಸಾಧನವೇ ಒಲೆಗಳು. ಗ್ರಾಮೀಣ ಜನರು ಬೇರೆ ಬೇರೆ ಕಾರ್ಯಕ್ಕಾಗಿ ಹಲವು ಮಾದರಿಯ ಒಲೆಗಳನ್ನು ಬಳಸುತ್ತಿದ್ದರು. ಇದರಲ್ಲಿ ಕೆಲವು ಮಾದರಿಯವು ದಿನದ 24 ಗಂಟೆಯು ಬೆಂಕಿಯಿಂದ ಉರಿಯುತ್ತಿದ್ದವು. ಇದಕ್ಕೆ ಇಂಧನವಾಗಿ ಕಟ್ಟಿಗೆಯನ್ನು ಬಳಸುತ್ತಿದ್ದರು. ಈ ಕಾರಣದಿಂದಲೆ ಪ್ರತಿ ವರ್ಷವು ಅಗಾಧ ಪ್ರಮಾಣದ ಮರಗಳನ್ನು ಕಡಿಯಲಾಗುತ್ತಿತ್ತು. ಕ್ರಮೇಣ ಮಲೆನಾಡಿನ ಅರಣ್ಯ ಕಣ್ಮರೆಯಾಗಲು ಪ್ರಾರಂಭವಾಯಿತು. ಇದರ ಮೂಲಕ ಮಳೆಯ ಸರಾಸರಿ ಪ್ರಮಾಣದಲ್ಲಿ ಇಳಿಕೆಯಾಯಿತು. ವನ್ಯಜೀವಿಗಳು ವಿನಾಶದ ಅಂಚಿಗೆ ಸರಿದವು. ಒಲೆಗಳನ್ನು ಈ ಕೆಳಗಿನಂತೆ ವಿಭಾಗಿಸಬಹುದು.

**ಅಡಿಗೆ ಮನೆ ಒಲೆ**

ಪ್ರತಿ ಮನೆಯಲ್ಲು ಆಹಾರ ಬೇಯಿಸಲು ಒಂದು ಒಲೆ ಇರುತ್ತದೆ. ಅದನ್ನು ಅಡಿಗೆಯ ಒಲೆ ಎಂದು ಕರೆಯುತ್ತಾರೆ. ಇದು ಆಹಾರ ಬೇಯಿಸುವುದರೊಂದಿಗೆ ಆ ಮನೆಯನ್ನು ಬಿಸಿಯಾಗಿಡಲು ಸಹಾಯ ಮಾಡುತ್ತದೆ. ಇದಕ್ಕೆ ಉರುವಲಾಗಿ ಕಟ್ಟಿಗೆಯನ್ನು ಬಳಸಲಾಗುತ್ತದೆ.

**ಹೊಲಸಿನ ಒಲೆ**

ಮಲೆನಾಡಿನ ಜನ ಶಿಕಾರಿಪ್ರಿಯರು. ಅದರೊಂದಿಗೆ ಮಾಂಸಾಹಾರವು ಪ್ರಿಯವಾದ ಆಹಾರ. ಇವರಿಗೆ ಮಾಂಸಾಹಾರ ಪ್ರಿಯವಾದರು ಅದನ್ನು ಮನೆ ಒಳಗಿನ ಸಾಮಾನ್ಯ ಅಡಿಗೆ ಒಲೆಯಲ್ಲಿ ತಯಾರಿಸುವುದಿಲ್ಲ. ಅದಕ್ಕಾಗಿ ಮನೆಗೆ ಹೊಂದಿಕೊಂಡಂತೆ ಹೊರಗಿನ ಅಂಕಣದಲ್ಲಿ ಅಂದರೆ ಕೊಟ್ಟಿಗೆ ಅಥವಾ ಕಡಿಮಾಡು ಎಂದು ಪ್ರಾದೇಶಿಕ ಭಾಷೆಯಲ್ಲಿ ಕರೆಯುವ ಸ್ಥಳದಲ್ಲಿ ಈ ಒಲೆಯನ್ನು ಹೂಡುತ್ತಾರೆ. ಇದು ಒಕ್ಕಲಿಗ ಮನೆಯ ವಿಶೇಷ. ಅವರು ಮಾಂಸವನ್ನು ಮನೆಯ ಒಳಗೆ ಬೇಯಿಸುವುದು ವರ್ಜ್ಯ. ಇದರಿಂದ ಮೈಲಿಗೆ ಆಗುತ್ತದೆ ಎಂಬ ಕಲ್ಪನೆ ಶೂದ್ರವರ್ಗದಲ್ಲಿಯೂ ಇತ್ತು ಎಂಬುದು ಗಮನಾರ್ಹ. ಇದಕ್ಕೆ ಬಳಸುವ ಪಾತ್ರೆಗಳನ್ನು ಬೇರೆಯೇ ಇಟ್ಟಿರುತ್ತಾರೆ. ಇದಕ್ಕೂ ಉರುವಲಾಗಿ ಕಟ್ಟಿಗೆ ಬಳಸುತ್ತಾರೆ. ಅಹಾರ ತಯಾರಿಸಿದ ನಂತರ ಶುದ್ಧ ಮಾಡುವುದಕ್ಕೆ ಸಗಣಿಯನ್ನು ಬಳಯುತ್ತಾರೆ.

**ಮುರ ಬೇಯಿಸುವ ಒಲೆ**

ಮುರ ಎಂಬುದು ಮಲೆನಾಡಿನ ಕೃಷಿಕ ಕುಟುಂಬಗಳಲ್ಲಿ ಇರುವ ಒಂದು ಪರಿಕಲ್ಪನೆ. ಇದು ಪಶುಗಳ ಆಹಾರ. ಇದಕ್ಕೆ ಹುಲ್ಲು, ಹುರುಳ ಕಾಳು, ಅಕ್ಕಿ ತೊಳೆದ ಮತ್ತು ಬೇಯಿಸಿದ ನೀರು ಮತ್ತು ಮನೆಯಲ್ಲಿ ಉಪಯೋಗಿಸಿ ಹೆಚ್ಚಾದ ತರಕಾರಿ ಹಣ್ಣು ಹಂಪಲ, ಆಹಾರ ಪದಾರ್ಥಗಳನ್ನು ಒಟ್ಟು ಸೇರಿಸಿ ಬೇಯಿಸಲು ಈ ಒಲೆಯನ್ನು ಉಪಯೋಗಿಸುತ್ತಾರೆ. ಇದು ದಿನದ ಇಪ್ಪತ್ತನಾಲ್ಕು ಘಂಟೆಯು ಸತತ ಉರಿಯುತ್ತಲೆ ಇರುತ್ತದೆ. ಈ ಜಾಗ ಮನೆಯ ಸಾಕು ಪ್ರಾಣಿಗಳಗೆ ಆಶ್ರಯತಾಣ. ಹಾಗೆ ಮಳೆಗಾಲದಲ್ಲಿ ನೆನೆದು ಬಂದ ಕೃಷಿ ಕಾರ್ಮಿಕರಿಗೆ ದೇಹ ಬಿಸಿ ಮಾಡಿಕೊಳ್ಳಲು ಸಹಕಾರಿ. ಇದಕ್ಕೆ ಉರುವಲಾಗಿ ಮರದ ದಪ್ಪ ದಪ್ಪನೆಯ ದಿಮ್ಮಿಗಳನ್ನು ಬಳಸುತ್ತಾರೆ.

**ಬಚ್ಚಲು ಮನೆ ಒಲೆ**

ಮಲೆನಾಡಿನ ಭಾಗದಲ್ಲಿರುವ ಶ್ರೀಮಂತರು ಅಥವಾ ಬಡವರು ಹಿಂದಿನ ಕಾಲದಲ್ಲಿ ಪ್ರತಿನಿತ್ಯ ಸ್ನಾನ ಮಾಡುತ್ತಿರಲಿಲ್ಲ. ಕೆಲವು ನಿಶ್ಚಿತ ದಿನಗಳಲ್ಲಿ ಮಾತ್ರ ಸ್ನಾನ. ಹೆಚ್ಚಾಗಿ ಶನಿವಾರ, ಸೋಮವಾರ ಮಾಡುತ್ತಿದ್ದರು. ಆ ದಿನ ಮನೆಯ ಎಲ್ಲಾರೂ ಸ್ನಾನ ಮಾಡಲೇ ಬೇಕು.

ಇದಕ್ಕಾಗಿ ಕೊಟ್ಟಿಗೆಯ ಒಂದು ಭಾಗ ಇಲ್ಲವೇ ಪ್ರತ್ಯೇಕವಾದ ಕೋಣೆಯಲ್ಲಿ ಒಲೆಯನ್ನು ಹೂಡಿ, ಶ್ರೀಮಂತರಾದರೆ ತಾಮ್ರದ ಹಂಡೆಯನ್ನು ಬಡವರಾದರೆ ಮಣ್ಣಿನ ಹಂಡೆಯನ್ನು ಹುಗಿದಿರುತ್ತಾರೆ. ಇದಕ್ಕೆ ಕಟ್ಟಿಗೆಯನ್ನು ಹಾಕಿ ಬಿಸಿ ನೀರು ಕಾಯಿಸುತ್ತಾರೆ. ಹಾಗೆಂದು ದಿನಾ ಬೆಂಕಿ ಹಾಕುವುದಿಲ್ಲ ಎಂದಲ್ಲ. ಬೇರೆ ದಿವಸ ಕೆಲಸ ಮಾಡಿ ಬಂದವರಿಗೆ ಕೈ ಕಾಲು ತೊಳೆಯಲು ಬಳಸುತ್ತಾರೆ. ಇದಕ್ಕೆ ಕುವೆಂಪುರವರ ಅಜ್ಜಯ್ಯನ ಅಭ್ಯಂಜನ ಎಂಬ ಲೇಖನದಲ್ಲಿ ಮಲೆನಾಡಿನ ಗೌಡ ಸಂಸ್ಕೃತಿಯಲ್ಲಿ ಸ್ನಾನದ ವಿಧಾನವನ್ನು ಚಿತ್ರಿಸಿರುವುದು ಗಮನಾರ್ಹ.

**ಹೊಗೆ ತಟ್ಟಿ ಹಾಕುವ ಒಲೆ**

ಮಲೆನಾಡಿನಲ್ಲಿ ಕೃಷಿಕ ಕುಟುಂಬಗಳೆ ಹೆಚ್ಚು. ಆ ಕಾಲದಲ್ಲಿ ವಾಣಿಜ್ಯ ಬೆಳೆ ಎಂದರೆ ಅಡಿಕೆ ಮಾತ್ರ. ಉಳಿದ ಬೆಳೆಗಳು ಅವರ ಸ್ವಂತದ ಬಳಕೆಗಾಗಿ ಬೆಳೆಸುತ್ತಾರೆ. ಹಲವು ಸಂದರ್ಭಗಳಲ್ಲಿ ಅಡಿಕೆಯನ್ನು ಒಣಗಿಸಲು ಬೇಕಾದ ಸೂರ್ಯನ ಬಿಸಿಲು ಸಾಕಾಗುವುದಿಲ್ಲ. ಕಾರಣ ಮೋಡಕವಿದ ವಾತಾವರಣ. ಅಂತಹ ಸಂದರ್ಭದಲ್ಲಿ ಅಡಿಕೆಯನ್ನು ಒಣಗಿಸಲೆಂದು ಒಲೆಗಳನ್ನು ಹೂಡುತ್ತಾರೆ. ಇದಕ್ಕೆ ಸೌದೆಯನ್ನು ಹಾಕಿ ಉರಿಸಿದಾಗ ಹೊರ ಹೊಮ್ಮುವ ಜ್ವಾಲೆಗಳು ಈ ಒಲೆಯ ನೇರಕ್ಕೆ ಎತ್ತರದಲ್ಲಿ ಚಪ್ಪರದ ಹಾಗೆ ಹಾಕಿ ಅದರ ಮೇಲೆ ತಟ್ಟಿಯನ್ನು ಹಾಕಿ ಅಡಿಕೆಯನ್ನು ಹರಡುತ್ತಾರೆ. ಅಗತ್ಯ ಬಿದ್ದಾಗ ಮಾತ್ರ ಈ ರೀತಿಯ ಒಲೆಯನ್ನು ಹೂಡುತ್ತಾರೆ. ಇದಕ್ಕೆ ಹೊಗೆ ತಟ್ಟಿ ಒಲೆ ಎಂದು ಕರೆಯುತ್ತಾರೆ.

**ಅಡಿಕೆ ಬೇಯಿಸುವ ಒಲೆ**

ಅಡಿಕೆಯನ್ನು ತಿನ್ನಲು ಯೋಗ್ಯಗೊಳಸಬೇಕಾದರೆ ಅದನ್ನು ಬೇಯಿಸಿ, ಬಣ್ಣ ಹಾಕಿ ಒಣಗಿಸುತ್ತಾರೆ. ಈ ಕೆಲಸಕ್ಕಾಗಿ ಅಡಿಕೆ ಚಪ್ಪರದ ಕೆಳಗೆ ಒಲೆಯನ್ನು ಹೂಡಿ ಅದಕ್ಕೆ ತಾಮ್ರದ ಹಂಡೆಯನ್ನು ಹುಗಿದಿರುತ್ತಾರೆ. ಈ ಒಲೆಗೆ ಅಡಿಕೆ ಕೊಯ್ಲಿನ ಕಾಲದಲ್ಲಿ ಮಾತ್ರ ಕೆಲಸ. ಇನ್ನು ಉಳದಂತೆ ಇದನ್ನು ಬೇರೆ ಉಪಯೋಗಕ್ಕೆ ಬಳಸುವುದಿಲ್ಲ.

**ಔಂತ್ಲದ ಒಲೆ**

ಮಲೆನಾಡಿನ ಪಾರಿಬಾಷಿಕ ಶಬ್ದದಲ್ಲಿ ಔಂತ್ಲ ಎಂದರೆ ಅತಿಥಿ ಸತ್ಕಾರ ಎಂದು ಅರ್ಥ. ಈ ಪ್ರದೇಶದಲ್ಲಿ ಹರಕೆ, ವಿವಾಹ, ಮಹಾಲಯ ಸಾಮಾನ್ಯವಾಗಿ ಆಚರಿಸುತ್ತಿದ್ದರಿಂದ ದೊಡ್ಡ ಪ್ರಮಾಣದಲ್ಲಿ ಅಡಿಗೆ ಮಾಡಬೇಕಿತ್ತು. ಇದನ್ನು ಮನೆಯ ಸಾಮಾನ್ಯ ಒಲೆಯಲ್ಲಿ ಮಡಲಾಗುತ್ತಿರಲಿಲ್ಲ. ಅದಕ್ಕಾಗಿ ಮನೆಯ ಸುತ್ತಲಿನ ಜಾಗದ ಒಂದು ಭಾಗದಲ್ಲಿ ನೆಲವನ್ನು ಕೊರೆದು ಒಲೆಯ ರೂಪ ನೀಡುತ್ತಾರೆ. ಇದು ಸಮಾರಂಭದ ನಂತರ ಮಣ್ಣಿನಿಂದ ಮುಚ್ಚುತ್ತಿದ್ದರು. ಈ ರೀತಿ ರೂಪುಗೊಂಡ ಒಲೆಯನ್ನು ಔಂತ್ಲದ ಒಲೆ ಎನ್ನುತ್ತಿದ್ದರು.

## ಕಲುಬಿಗಳು



ಹಿಂದಿನ ಕಾಲದ ಮಲೆನಾಡಿನ ಮನೆಗಳಲ್ಲಿ ವಸ್ತುಗಳನ್ನು ಮತ್ತು ಅಕ್ಕಿಗಳನ್ನು ಸಂಗ್ರಹಿಸಿಡಲು ಯಾವುದೇ ಆಧುನಿಕವಾದ ಸಲಕರಣೆಗಳು ಇಲ್ಲದೆ ಇರುವ ಕಾಲದಲ್ಲಿ ತಾವು ಕಷ್ಟಪಟ್ಟು ಸಂಗ್ರಹಿಸಿದ ಆಹಾರ ವಸ್ತುಗಳನ್ನು ದೀರ್ಘ ಕಾಲ ಇಲಿ, ಹೆಗ್ಗಣ, ಕ್ರಿಮಿ ಕೀಟಗಳು ಮತ್ತು ತೇವಾಂಶದಿಂದ ಕೆಡದಂತೆ ರಕ್ಷಿಸಿಡುವ ಸಲುವಾಗಿ ಬಳಸುವ ಸಾಧನವೆ ಕಲುಬಿಗಳು. ಇದನ್ನು ಮಾವು, ದೂಪ, ಮತ್ತಿ ಮುಂತಾದ ಬೃಹದಾಕಾರದ ಕಾಂಡವನ್ನು ಹೊಂದಿರುವ ಮರಗಳನ್ನು ಬಳಸಿ ತಯಾರಿಸಿರುತ್ತಾರೆ. ಮುಖ್ಯವಾಗಿ ಈ ಮರಗಳು ಮೃದುವಾಗಿರಬೇಕಿತ್ತು. ಅದಕ್ಕಾಗಿ ಮಾವು ಮತ್ತು ದೂಪದ ಮರವನ್ನು ಹೆಚ್ಚಾಗಿ ಬಳಸುತ್ತಿದ್ದರು. ಬೃಹದಾಕಾರದ ಮರವನ್ನು ಆಯ್ಕೆ ಮಾಡಲು ಮುಖ್ಯ ಕಾರಣ ಕಲುಬಿಗಳನ್ನು ಯಾವುದಾದರೂ ಒಂದೇ ಮರದಿಂದ ಕೆತ್ತಿರುತ್ತಾರೆ. ಅಥವಾ ಕೊರೆದು ಮಾಡುತ್ತಾರೆ. ಇದು ದೋಣಿಯ ಆಕಾರದಲ್ಲಿದ್ದು ಇದಕ್ಕೆ ಯಾವುದೇ ಜೋಡಣೆ ಇರುವುದಿಲ್ಲ. ಶ್ರೀಮಂತರ ಮನೆಯಲ್ಲಿ ಇದರ ಬಳಕೆ ಇರುತ್ತಿತ್ತು. ಬಡವರು ಬಿದಿರಿನಿಂದ ಹಣೆದ ತಟ್ಟಿಯನ್ನು ಬಳಸಿ ಮಾಡಿದ ಕಣಜ ಎಂದು ಕರೆಯುವ ಸಾಧನ ಬಳಸುತ್ತಿದ್ದರು. ಇನ್ನು ಕೆಲವರು ಚಿಕ್ಕ ಗಾತ್ರದ ದೋಣಿಗಳನ್ನು ಬಳಸುತ್ತಿದ್ದರು. ಇದನ್ನು ಹಲವು ಹೆಸರಿನಿಂದ ಕರೆಯುತ್ತಾರೆ. ಅವುಗಳೆಂದರೆ ದೋಣಿ, ಕಣಜ, ಕಲುಬಿ ಎಂದು. ಕೆಲವು ಬಾರಿ ಇದರ ಮೇಲೆ ಹಾಸಿಗೆಯನ್ನು ಹಾಕಿಕೊಂಡು ಮಲಗುವ ಮಂಚವನ್ನಾಗಿಯು ಬಳಸುತ್ತಾರೆ.

ಮಲೆನಾಡಿನ ಅವಿಭಕ್ತ ಕುಟುಂಬದಲ್ಲಿ ಅಡಿಗೆ ಮಾಡುವ ಕೆಲಸ ಸರದಿಯ ಪ್ರಕಾರ ನಡೆಯುತ್ತದೆ. ಈ ಕೆಲಸ ಯಾರಿಗೋ ಒಬ್ಬರಿಗೆ ಮೀಸಲಾಗಿರುತ್ತಿರಲಿಲ್ಲ. ಅಂತಹ ಸಂದರ್ಭಗಳಲ್ಲಿ ಚಿಕ್ಕ ಗಾತ್ರದ ಕಲುಬಿಯನ್ನು ಅಡಿಗೆ ಮನೆಯಲ್ಲಿಟ್ಟುಕೊಳ್ಳುತ್ತಿದ್ದರು. ಅದರಲ್ಲಿ ತಮಗೆ ಸಂಬಂಧಿಸಿದ ವಸ್ತು ಮತ್ತು ಪದಾರ್ಥಗಳನ್ನಿಟ್ಟು ಬೀಗ ಹಾಕಿಕೊಳ್ಳುತ್ತಿದ್ದರು. ಈ

ಕಾದಂಬರಿಯಲ್ಲಿಯೂ ಸುಬ್ಬಮ್ಮ ಚಂದ್ರೇಗೌಡರ ಮನೆಗೆ ಬಂದಾಗ ಅದುವರೆಗೂ ಕಷ್ಟದ ಜೀವನ ನಡೆಸಸುತ್ತಿದ್ದವಳಿಗೆ ಇಲ್ಲಿರುವ ಸಾಮಾನುಗಳು ವಿಶೇಷವಾಗಿ ಕಾಣುತ್ತವೆ. ಅದಕ್ಕಾಗಿ ಆಕೆ ಕಲುಬಿಗಳಲ್ಲಿ ವಸ್ತುಗಳನ್ನು ಹಾಕಿ ಬೀಗ ಹಾಕುವ ಸಂಪ್ರದಾಯ ಪ್ರಾರಂಭಿಸುತ್ತಾಳೆ. ಇದು ಆ ಮನೆಗೆ ಹೊಸ ಸಂಪ್ರದಾಯವಾಗಿದ್ದರಿಂದ ಮನೆಯ ಇತರೆ ಸದಸ್ಯರು ಇದನ್ನು ಇಷ್ಟಪಡದೆ ವಿರೋಧಿಸುತ್ತಾರೆ.

## ವಿಭಿನ್ನ ಮಾದರಿಯ ಭಕ್ಷ ಭೋಜನಗಳು

ಮನುಷ್ಯ ಬದುಕಿರಲು ಆಹಾರ ಬೇಕು. ಹಾಗೆಂದು ಸಿಕ್ಕ ಸಿಕ್ಕ ಆಹಾರವನ್ನು ಬಳಸುವುದಿಲ್ಲ. ತನಗಿಷ್ಟವಾದದನ್ನು ತಯಾರಿಸಿಕೊಂಡು ಸಂತೋಷಿಸುತ್ತಾನೆ. ಮನುಷ್ಯನ ಮೂಲಭೂತ ಅವಶ್ಯಕತೆಯಲ್ಲಿ ಆಹಾರವು ಒಂದು. ಒಂದೊಂದು ಭೂಪ್ರದೇಶದಲ್ಲಿಯೂ ಒದೊಂದು ವಿಶೇಷವಾದ ಆಹಾರ ಪದ್ಧತಿಗಳು ಇರುತ್ತವೆ. ಈ ಕಾದಂಬರಿಯಲ್ಲಿ ಕಾನೂರು ಚಂದ್ರೇಗೌಡರದು ಒಂದು ಕುಗ್ರಾಮ. ಇಲ್ಲಿ ಆಧುನಿಕತೆ ಎಂಬುದಿಲ್ಲ. ಇದು ಆಹಾರ ಪದ್ಧತಿಗೂ ಅನ್ವಯಿಸುತ್ತದೆ. ಆಯಾ ಕಾಲದಲ್ಲಿ ತಮ್ಮ ಸುತ್ತ ಮುತ್ತಲೂ ಸಿಗುವ ವಸ್ತುಗಳನ್ನು ಆಹಾರವಾಗಿ ಬಳಸುತ್ತಾರೆ. ಉದಾಹರಣೆಗೆ ಮಳೆಗಾಲ ಪ್ರಾರಂಭವಾಯಿತು ಎಂದರೆ ಅವರ ತರಕಾರಿಗಳು ವಿಚಿತ್ರವಾಗಿರುತ್ತದೆ. ಅಂದರೆ ಎಳೆಯ ಬಿದಿರು ಇದನ್ನು ಕಳಲೆ ಎಂದು, ಕೆಸುವಿನ ಸೊಪ್ಪು, ಅಣಬೆ, ಗದ್ದೆಯ ಭಾಗದಲ್ಲಿ ಸಿಗುವ ಏಡಿ, ಸಣ್ಣ ಸಣ್ಣ ಮೀನುಗಳು ಇವನ್ನೆ ಬಳಸುತ್ತಾರೆ. ಇವುಗಳು ಆಹಾರದ ಕೊರತೆಯನ್ನು ನೀಗಿಸುವುದರೊಂದಿಗೆ ದೇಹಕ್ಕೆ ಅನುಕೂಲಕರ ವಾತಾವರಣ ನಿರ್ಮಾಣ ಮಾಡಿಕೊಡುತ್ತವೆ. ಉದಾಹರಣೆಗೆ ಮಳೆಗಾಲದಲ್ಲಿ ಗದ್ದೆಯ, ತೋಟದ ಕೆಲಸ ಮಾಡಿ ಬರುವವರಿಗೆ ದೇಹದ ಉಷ್ಣತೆಯನ್ನು ಹೆಚ್ಚಿಸಲು ಮತ್ತು ಕಬ್ಬಿಣದ ಖನಿಜಾಂಶ ದೇಹದಲ್ಲಿ ಹೆಚ್ಚಾಗಲು ಕೆಸುವಿನ ಸೊಪ್ಪು ಮತ್ತು ಕಳಲೆಯನ್ನು ಉಪಯೋಗಿಸುತ್ತಾರೆ. ಕಾದಂಬರಿಯಲ್ಲಿ ಬೇರೆ ಬೇರೆ ಆಹಾರದ ಉಲ್ಲೇಖವಿದೆ. ಅವುಗಳನ್ನು ಇಲ್ಲಿ ಪ್ರತ್ಯೇಕವಾಗಿ ಪರಿಚಯಿಸಲಾಗುತ್ತದೆ.

ಮಲೆನಾಡಿನ ಜನರ ಮುಖ್ಯ ಆಹಾರ ಅಕ್ಕಿ. ಇದರಿಂದ ಅನ್ನ, ಗಂಜಿ, ರೊಟ್ಟಿ, ಕಡಬು, ದೋಸೆ ಮುಂತಾದವನ್ನು ತಯಾರಿಸಿಕೊಳ್ಳುತ್ತಿದ್ದರು. ಅನ್ನ ಬೇಯಿಸಿದ ನೀರನ್ನು ಬಳಸುತ್ತಿದ್ದರು. ಜೊತೆಗೆ ಅಕ್ಕಿ ತೊಳೆದ ನೀರಿನಲ್ಲಿ ಪಾನಕ ಎಂಬ ಬಾಯಾರಿಕೆಗೆ ಪಾನೀಯವನ್ನು ಮಾಡಿಕೊಳ್ಳುತ್ತಿದ್ದರು. ಅಕ್ಕಿ ತೊಳೆದ ನೀರಿಗೆ ಬೆಲ್ಲ, ಏಲಕ್ಕಿ ಹಾಕಿ ಶೋದಿಸಿ ಕುಡಿಯುತ್ತಿದ್ದರು. ಇದಕ್ಕೆ ಅಮೃತ ಪಾನಕ ಎಂದು ಹೆಸರು. ಮನೆಗಳಿಗೆ ಅತಿಥಿಗಳು ಬಂದಾಗ ಅವರ ಸತ್ಕಾರಕ್ಕಾಗಿ ಸಿಹಿ ತಿಂಡಿಗಳಾದ ಸುಕಿನುಂಡೆ, ಅತಿರಸ ಕಜ್ಜಾಯ, ಕಡುಬು, ಕಾರದ ತಿಂಡಿ, ವಡೆ, ಚಕ್ಕುಲಿ, ಕೋಡುಬಳೆ ಮುಂತಾದ ತಿಂಡಿಗಳನ್ನು ತಯಾರಿಸಿಕೊಳ್ಳುತ್ತಿದ್ದರು. ಒಕ್ಕಲಿಗರ ಅತ್ಯಂತ ಜನಪ್ರಿಯವಾದ ತಿಂಡಿ ಎಂದರೆ ಕಡುಬು. ಬಹಳ ಜನ ಇದ್ದಾಗ ಇದು ಶ್ರಮದ ಕೆಲಸವೆನಿಸಿಕೊಳ್ಳುತ್ತಿತ್ತು. ಮಲೆನಾಡಿನ ಜನರ ಜನಪ್ರಿಯವಾದ ಸಿಹಿತಿಂಡಿಯನ್ನು ಪಾಯಸ ಎನ್ನುವರು. ಇದನ್ನು ಹಲವು ರೀತಿಯಲ್ಲಿ ತಯಾರಿಸುತ್ತಿದ್ದರು. ಅದನ್ನು ರೊಟ್ಟಿ, ಪಾಯಸ, ಗುಳಿಗೆ ಪಾಯಸ, ಗೋಧಿ ಪಾಯಸ, ಹಾಲು ಪಾಯಸ, ಪರಮಾನ್ನ ಮುಂತಾದ ವಿಧಗಳನ್ನು

ಗಮನಿಸಬಹುದು. ಒಟ್ಟಾರೆ ಈ ಭಾಗದಲ್ಲಿನ ಜನರಿಗೆ ನಗರಕ್ಕೆ ಯಾವುದೇ ಸಂಪರ್ಕ ಇಲ್ಲದ ಸಮಯದಲ್ಲಿ ಸಿಹಿ ಪದಾರ್ಥ ಎಂದರೆ ಇದೊಂದೆ. ಇದನ್ನು ಬಡವ ಮತ್ತು ಶ್ರೀಮಂತ ಎಂಬ ಬೇಧವಿಲ್ಲದೆ ಎಲ್ಲಾ ವರ್ಗದವರು ಎಲ್ಲಾ ಜಾತಿಯವರು ಸುಲಭವಾಗಿ ಮಾಡಿ ತಿನ್ನುವ ಒಂದು ಪದಾರ್ಥವಾಗಿತ್ತು.

**ಕರಿಮೀನು ಚಟ್ನಿ**

ಮಲೆನಾಡಿನ ಶೂದ್ರ ಜನಾಂಗದವರು ಮಾಂಸಾಹಾರ ಪ್ರಿಯರು. ಸದಾ ಒಂದಿಲ್ಲೊಂದು ಶಿಕಾರಿಯನ್ನು ಮಾಡುತ್ತಾ ಇರುವರು. ಇದರೊಂದಿಗೆ ಹಕ್ಕಿಗಳಿಗೆ ಸೆಬೆಯನ್ನು ಇಡುವುದು ಇವರ ಹವ್ಯಾಸ. ಇದಕ್ಕೆ ಆಸ್ಪದವಾಗದಿದ್ದಾಗ ಮೀನಿನ ಶಿಕಾರಿ ಮಾಡುತ್ತಿದ್ದರು. ಸಾಮಾನ್ಯವಾಗಿ ಇವರ ಕೃಷಿ ಮೂಲದ ಹತ್ತಿರ ನೀರಿನ ಮೂಲವಿದ್ದು ಅಲ್ಲಿರುವ ಜಲಚರಗಳನ್ನು ಜನರು ತಮ್ಮ ಆಹಾರದ ಒಂದು ಭಾಗವಾಗಿ ಮಾಡಿಕೊಳ್ಳುತ್ತಾರೆ. ಅವುಗಳಲ್ಲಿನ ಒಂದು ವಿಧಾನವೇ ಕರಿಮೀನು ಚಟ್ನಿ. ಗ್ರಾಮೀಣ ಪ್ರದೇಶದಲ್ಲಿ ಮಳೆಗಾಲದಲ್ಲಿ ಪ್ರವಾಹ ಬಂದಾಗ ಮೀನುಗಳು ಸುಲಭವಾಗಿ ಗದ್ದೆಯನ್ನು ಬಂದು ಸೇರುತ್ತಿದ್ದವು. ಹಾಗೆ ಬಂದ ಮೀನುಗಳು ಮರಿಯನ್ನು ಮಾಡಿ ಪುನಃ ಸೆಪ್ಟೆಂಬರ್, ಅಕ್ಟೋಬರ್ ತಿಂಗಳಿಗೆ ಪುನಃ ಹೊಳೆ ಸೇರಿಕೊಳ್ಳುವ ಸಮಯ. ಆ ಕಾಲದಲ್ಲಿ ಹಳ್ಳಿಗರು ಮೀನು ಹಿಡಿಯಲೆಂದು ಕುಣಿಗಳನ್ನು ತಯಾರಿಸಿ ಇಟ್ಟುಕೊಂಡಿರುತ್ತಾರೆ. ಅದರ ಮೂಲಕ ಮೀನು ಹಿಡಿಯುತ್ತಾರೆ.

ಹೀಗೆ ಹಿಡಿದ ಮೀನನ್ನು ಅಡಿಕೆ ಒಣಗಿಸುವ ತಟ್ಟಿಯ ಮೇಲೆ ಹರಡಿ ತಟ್ಟಿಯನ್ನು ಒಲೆಯ ಮೇಲೆ ಮೂರು ನಾಲ್ಕು ಅಡಿ ಎತ್ತರವಾಗಿ ಇಡುವಂತೆ ಮಾಡಿ ಅಡಿಯಿಂದ ಬೆಂಕಿ ಹಾಕಿ ಒಣಗಿಸುತ್ತಾರೆ. ಚೆನ್ನಾಗಿ ಒಣಗಿದ ನಂತರ ಮಣ್ಣಿನ ಗಡಿಗೆಯಲ್ಲಿ ತುಂಬಿಸುತ್ತಾರೆ. ಉಪಯೋಗಿಸಲು ಬೇಕಾದಾಗ ಅದನ್ನು ಆರಿಸಿಕೊಂಡು ಚೆನ್ನಾಗಿ ತೊಳೆದು ಪುಡಿ ಮಾಡಿ, ಹುಳಿ, ಉಪ್ಪುಕಾರ ಸಾಂಬಾರು ಸೇರಿಸಿ ಬೇಯಿಸುತ್ತಾರೆ. ಇದನ್ನೇ ಚಟ್ನಿ ಎಂದು. ಇದಕ್ಕೆ ಕರಿಮೀನು ಎಂದು ಹೆಸರು. ಬರಲು ಕಾರಣ ಹೊಗೆ ತಟ್ಟಿಯಲ್ಲಿ ಬೆಂಕಿಯ ಶಾಖದಲ್ಲಿ ಒಣಗಿಸಿದ್ದರಿಂದ ಅದು ಬಣ್ಣ ಕಪ್ಪಾಗಿರುತ್ತದೆ. ಆದ್ದರಿಂದ ಕರಿಮೀನೆಂದು ಹೆಸರು. ಇದರಿಂದ ತಯಾರಿಸಿದ ಚಟ್ನಿಯನ್ನು ಕರಿಮೀನು ಚಟ್ನಿ ಎನ್ನುವರು.

**ಏಡಿ ಪಲ್ಯ – ಚಟ್ನಿ**

ಏಡಿ ಎಂಬುದು ಒಂದು ಜಲಚರ ಜೀವಿ. ಇದನ್ನು ಮನುಷ್ಯ ತನ್ನ ಆಹಾರದ ಸಲುವಾಗಿ ಹಿಡಿದು ಅದರ ಕೈಕಾಲುಗಳನ್ನೆಲ್ಲ ಮುರಿದು ಹೊಟ್ಟೆಯ ಮೃದು ಭಾಗವನ್ನು ಚೆನ್ನಾಗಿ ತೊಳೆದು ಬೆಂಕಿಯಲ್ಲಿ ಸುಟ್ಟು ಅದಕ್ಕೆ ಉಪ್ಪು, ಹುಳಿಕಾರವನ್ನು ಸೇರಿಸಿ ಅದನ್ನು ಕಲ್ಲುಗುಂಡಿಯಿಂದ ಚೆನ್ನಾಗಿ ಅರೆದು ಚಟ್ನಿಯನ್ನು ತಯಾರಿಸುತ್ತಾರೆ. ಬಹುತೇಕ ಒಕ್ಕಲಿಗರಿಗೆ ಪ್ರಿಯವಾದ ಆಹಾರ. ಕಾದಂಬರಿಯಲ್ಲಿ ಬೈರ, ಸಿದ್ದರ ಶಿಕಾರಿ ಎಂಬ ಅಧ್ಯಾಯದಲ್ಲ ಏಡಿ ಶಿಕಾರಿಯೇ ಮುಖ್ಯವಾಗಿರುತ್ತದೆ.

**ಚೆಗಳ ಇರುವೆ ಚಟ್ನಿ**

ಚೆಗಳ ಎಂಬುದು ಕೆಂಪು ಜಾತಿಯ ಇರುವೆ. ಇದು ಮರದ ಎಲೆಗಳನ್ನು ಸೇರಿಸಿ ಗೂಡು ಮಾಡಿ ವಾಸಿಸುತ್ತದೆ. ಇವುಗಳನ್ನು ಮನುಷ್ಯ ಆಹಾರವಾಗಿ ಬಳಸುತ್ತಾನೆ. ಒಂದು ಬಿದರಿನಿಂದ ತಯಾರಿಸಿದ ಅಗಲವಾದ ಮರವನ್ನು ತೆಗೆದುಕೊಂಡು ಅದರಲ್ಲಿ ಉಪ್ಪನ್ನು ಹರಡಿ ಇರುವೆ ಗೂಡಿನ ಕೆಳಗೆ ಹಿಡಿದು ಇನ್ನೊಂದು ಕೈಯಿಂದ ಇರುವೆ ಗೂಡನ್ನು ಅಲ್ಲಾಡಿಸುತ್ತಾರೆ. ಆಗ ಅದರೊಳಗಿರುವ ಇರುವೆ ಮತ್ತು ಮೊಟ್ಟೆ ಎರಡು ಉಪ್ಪಿನ ಮೇಲೆ ಬೆದ್ದಾಗ ಅವು ನಿಶ್ಚಲಗೊಳ್ಳುತ್ತದೆ. ಅದನ್ನು ಸಂಗ್ರಹಿಸಿ ಬೆಂಕಿಯಲ್ಲಿ ಹುರಿದು ಅದರಿಂದ ಚಟ್ನಿಯನ್ನು ತಯಾರಿಸುತ್ತಾರೆ. ಮಲೆನಾಡಿನ ಒಕ್ಕಲಿಗರಲ್ಲಿ ವಿಶೇಷ ಅಡಿಗೆಯಲ್ಲಿ ಇದೂ ಒಂದು. ಈ ಚಟ್ನಿಗೆ ಔಷಧೀಯ ಗುಣ ಇದ್ದು, ಕಣ್ಣಿಗೆ ಅಥವಾ ದೃಷ್ಟಿದೋಷಕ್ಕೆ ಬಹಳ ಉಪಯೋಗಕಾರಿ ಎನ್ನುತ್ತಾರೆ. ಕುವೆಂಪುರವರ ಮಲೆಗಳಲ್ಲಿ ಮದುಮಗಳು ಕಾದಂಬರಿಯಲ್ಲಿ ಈ ಉಲ್ಲೇಖವಿದೆ. ಈ ಕಾದಂಬರಿಯ ಹೂವಯ್ಯ ಧ್ಯಾನ ಮಗ್ನನಾದ ಸಂದರ್ಭದಲ್ಲಿ ಸೋಮ ಜ್ವರ ಬಂದ ಬಾಯಿಗೆ ಏನೂ ರುಚಿಸುವುದಿಲ್ಲ. ಅದಕ್ಕಾಗಿ ಈ ಶಿಕಾರಿ ಮಾಡುತ್ತಿದ್ದವೆ ಎಂದು ಹೇಳಿ ಇರುವೆ ಸಂಗ್ರಹಿಸುವ ಬಗ್ಗೆ ಮಾಹಿತಿ ಇದೆ.

**ಮಾಂಸದ ಸಂಡಿಗೆ**

ಮಲೆನಾಡಿನಲ್ಲಿ ಶಿಕಾರಿಯು ಬೆಳೆ ರಕ್ಷಣೆ ಮತ್ತು ಜೀವರಕ್ಷಣೆಯೊಂದಿಗೆ ಮನುಷ್ಯ ತನ್ನ ವಿರಾಮದ ಹೊತ್ತನ್ನು ಕಳೆಯಲು ಮನೋರಂಜನೆಗಾಗಿ, ಆಹಾರಕ್ಕಾಗಿಯೂ ಬೇಟೆಯಾಡುವ ಹವ್ಯಾಸವನ್ನು ಬಳಸಿಕೊಂಡಿದ್ದ. ಕಾದಂಬರಿಯ ಕಾಲಘಟ್ಟದಲ್ಲಿ ಮಲೆನಾಡಿನಲ್ಲಿ ಅರಣ್ಯ ಪ್ರದೇಶ ಅಧಿಕವಾಗಿದ್ದು ಸಹಜವೆಂಬಂತೆ ಕಾಡುಪ್ರಾಣಿಗಳು ಇದ್ದವು. ಕೆಲವು ಸಾರಿ ದೊಡ್ಡ ಪ್ರಾಣಿಯ ಶಿಕಾರಿ ಮಾಡಿದಾಗ ಬಹಳ ಮಾಂಸ ಸಿಗುತ್ತಿತ್ತು. ಅದರಲ್ಲಿ ಮೃದುವಾದ ಭಾಗವನ್ನು ಸಣ್ಣ ಸಣ್ಣ ತುಂಡುಗಳಾಗಿ ಕತ್ತರಿಸಿ ಮೂರು ಅಡಿ ಉದ್ದದ ಬಿದಿರಿನ ಕಡ್ಡಿಯನ್ನು ಮಾಡಿ ಈ ಮಾಂಸದ ಹೋಳುಗಳನ್ನು ಅದಕ್ಕೆ ಸುರಿದು ಅಡಿಗೆ ಮಾಡುವ ಒಲೆಯ ಮೇಲ್‌ಭಾಗದಲ್ಲಿ ಬೆಂಕಿ ತಗಲುವಷ್ಟು ಎತ್ತರದಲ್ಲಿ ತೂಗು ಹಾಕುತ್ತಿದ್ದರು. ಅದು ಕಲ್ಲಿನಷ್ಟು ಗಟ್ಟಿ ಆಗುವ ತನಕ ಒಣಗಿಸುತ್ತಿದ್ದರು. ನಂತರ ಕಡ್ಡಿಯಿಂದ ಬೇರ್ಪಡಿಸಿ ಮಣ್ಣಿನ ಗಡಿಗೆಯೊಳಗೆ ತುಂಬಿಸಿ ಅದರ ಜೊತೆಗೆ ಸ್ವಲ್ಪ ಹುಲ್ಲನ್ನು ಕತ್ತರಿಸಿ ಹಾಕುತ್ತಾರೆ. ಇದು ಪಾತ್ರೆಯ ಒಳಭಾಗ ತಂಡಿ ಬರದಂತೆ ತಡೆಯುತ್ತದೆ. ಆ ಪಾತ್ರೆಗೆ ಗಾಳಿ ಬೆಳಕು ಹೋಗದಂತೆ ಮುಚ್ಚಿಡುತ್ತಾರೆ. ಅಗತ್ಯ ಬಿದ್ದಾಗ ತೆಗೆದು ಬಳಸಿಕೊಳ್ಳುತ್ತಾರೆ. ಇದಕ್ಕೆ ಸಂಡಿಗೆ ಪಲ್ಯ ಎಂದು ಹೆಸರು. ಇಂತಹ ಹಲವು ರೀತಿಯ ವಿಶೇಷ ಆಹಾರಗಳನ್ನು ಬಳಸುತ್ತಾರೆ. ಈ ಪ್ರಾಂತ್ಯದಲ್ಲಿ ಬಳಸುವ ಈ ಆಹಾರಗಳು ಬೇರೆಡೆ ಬಳಸುವುದಿಲ್ಲ. ಇದು ಮಾನವನ ಆಹಾರದ ಅವಶ್ಯಕತೆ ಮತ್ತು ಸ್ಥಳೀಯವಾಗಿ ಸಿಗುವುದನ್ನು ಮಿತವಾಗಿ ಬಳಸಿ ಮುಂದಿನ ದಿನಗಳಿಗೆ ಕೂಡಿಡುವ ಅವನ ಪ್ರಯತ್ನವನ್ನು ತೋರಿಸುತ್ತದೆ. ಈಗಿನಂತೆ ಆ ಕಾಲದಲ್ಲಿ ಫ್ರಿಜ್ಡ್‌ಗಳು ಇಲ್ಲವಾದ್ದರಿಂದ ಎಲ್ಲಾ ಆಹಾರಗಳನ್ನು ಒಣಗಿಸಿಡುವ ಮಾರ್ಗ ಕಂಡುಕೊಂಡರು. ಇದಕ್ಕೆ ಶ್ರೀಮಂತ ಬಡವ ಎಂಬ ಯಾವ ಭೇದವು ಇರಲಿಲ್ಲ.

ಗ್ರಾಮೀಣ ಜನರು ಪ್ರಕೃತಿಯ ಮಕ್ಕಳಾದ್ದರಿಂದ ಪ್ರಕೃತಿಯನ್ನು ಅರಿತು ಬದುಕುವ ಜಾಣ್ಮೆ ಅವರಲ್ಲಿತ್ತು. ಆದ ಕಾರಣ ಯಾವ ಕಾಲಕ್ಕೆ ಯಾವ ಹಣ್ಣು, ತರಕಾರಿ, ಮೀನು, ಮಾಂಸ ಅಧಿಕವಾಗಿ ದೊರೆಯುತ್ತದೂ ಅದನ್ನು ಬಳಸಿ ಉಳಿದದ್ದನ್ನು ಶೇಖರಿಸಿ ಇಟ್ಟುಕೊಳ್ಳುತ್ತಿದ್ದರು. ಇದು ಬೇರೆಯವರಿಗೆ ಹಿತವಾಗದಿದ್ದರೂ ಆ ಕಾಲದ ಜನರಿಗೆ ಆಗ ಅನಿವಾರ್ಯವಾಗಿತ್ತು ಮತ್ತು ಇದನ್ನು ಸಮಾಜ ಒಪ್ಪಿಕೊಂಡಿತ್ತು.

## ಪೂಜೆ ಹರಕೆಗಳು

ಈ ಕಾದಂಬರಿಯಲ್ಲಿ ಬರುವ ಚಂದ್ರೇಗೌಡ, ಮುತ್ತಳ್ಳಿ ಶಾಮೇಗೌಡ, ಸೀತೆಮನೆ ಸಿಂಗಪ್ಪ ಗೌಡ, ಕೆಳಕಾನೂರು ಅಣ್ಣಯ್ಯಗೌಡ ಮುಂತಾದ ಕುಟುಂಬಗಳು ಶ್ರೀ ವೈಷ್ಣವ ನಾಮಧಾರಿ ಕುಟುಂಬವಾಗಿದ್ದು ಇವರು ವಿಷ್ಣುವಿನ ಭಕ್ತರಾದ್ದರಿಂದ ಮನೆಯ ಮುಂಭಾಗದಲ್ಲಿ ಬೃಂದಾವನ ಕಟ್ಟೆಯನ್ನು ಕಟ್ಟಿಸಿರುತ್ತಿದ್ದರು. ಈ ತುಳಸಿ ಕಟ್ಟೆಯಲ್ಲಿ ಶ್ರೀ ವಿಷ್ಣು ವಾಸಿಸುತ್ತಾನೆ ಎಂಬ ನಂಬಿಕೆಯಿಂದ ನಿತ್ಯ ಪೂಜಿಸುತ್ತಾರೆ. ಆದರೆ ವಿಶೇಷವಾಗಿ ಶನಿವಾರ ಹಾಗೂ ಸೋಮವಾರ ಮನೆಯ ಯಜಮಾನ ಸ್ನಾನ ಮಾಡಿಕೊಂಡು ಬಂದು ಕಟ್ಟೆಯನ್ನೆ ಪೂಜಿಸುವುದು ವಾಡಿಕೆ. ವಿಶೇಷ ಸಂದರ್ಭದಲ್ಲಿ ಮಾತ್ರ ಈ ಪೂಜೆ, ಪುನಸ್ಕಾರಗಳಿಗೆ ಜೋಯಿಸರನ್ನು ಅವಲಂಬಿಸುತ್ತಿದ್ದರು. ಈ ಸಂದರ್ಭದಲ್ಲಿ ಬಳಸುತ್ತಿದ್ದ ಪೂಜಾ ಸಾಮಗ್ರಿಗಳು ಪಿತ್ರಾರ್ಜಿತವಾಗಿ ಬಂದಿದ್ದು ಅವುಗಳ ಮೇಲೆ ವಿಶೇಷವಾದ ಭಕ್ತಿ ಗೌರವಗಳಿದ್ದವು. ಮುತ್ತಳ್ಳಿ ಶಾಮೇಗೌಡರ ಪೂಜಾ ಸಾಮಗ್ರಿಗಳನ್ನು ಕಾದಂಬರಿಕಾರರು ಈ ರೀತಿ ವಿವರಿಸುತ್ತಾರೆ.

> "ಮದ್ದಿನ ಮನೆ ಎನ್ನುವ ನಾಮದ ಪೆಟ್ಟಿಗೆಯಿದ್ದು, ಅದರ ಕತ್ತಲಗವಿಯಲ್ಲಿ ಅನೇಕ ವಸ್ತುಗಳು ಬಹಳ ಕಾಲದಿಂದಲೂ ತಪಸ್ಸು ಮಾಡುತ್ತಿದ್ದವು. ಅದರಲ್ಲಿ ಕೆಂಪುನಾಮದ ಕರಡಿಗೆ, ಬಿಳಿ ನಾಮದ ಪತಾಕೆಗಳು, ತುಳಸಿ ಮಣಿಗಳ ಮಾಲೆ, ಒಣಗಿದ ತುಳಸಿಯ ಎಲೆಗಳು, ಒಂದು ಒಡಕಲು ಕನ್ನಡಿ, ವಿಭೂತಿಯ ಹುಡಿ, ನಾಲ್ಕೈದು ಜರಠವಾದ ಮೂರು ಕಾಸು, ಆರು ಕಾಸುಗಳು, ಒಂದು ಬೆಳ್ಳಿಯ ಸಣ್ಣ ತ್ರಿಶೂಲ ಇತ್ಯಾದಿ ಆ ಪೆಟ್ಟಿಗೆಯಲ್ಲಿ ಇರುತ್ತಿತ್ತು" {ಕಾನೂರು ಹೆಗ್ಗಡತಿ, ಪು.ಸಂಖ್ಯೆ.82-83}

ಇದು ಕೇವಲ ಶಾಮೇಗೌಡರ ವಿಚಾರ ಮಾತ್ರವಲ್ಲ. ಬಹುತೇಕ ಆ ಕಾಲದ ಗೌಡ ಸಂಸ್ಕೃತಿಯ ಎಲ್ಲಾ ಮನೆಯ ಯಜಮಾನರ ಹತ್ತಿರ ಈ ರೀತಿಯ ಪೆಟ್ಟಿಗೆ ಇದ್ದು ಅವರೆಲ್ಲರ ಪೂಜಾ ವಿಧಾನ ಒಂದೇ ಆಗಿರುತ್ತಿತ್ತು. ಪೂಜೆ ಮಾಡುವಾಗ ಮಾತ್ರ ಸ್ನಾನ, ಮಡಿ ಬಟ್ಟೆಯನ್ನು ಧರಿಸುತ್ತಿದ್ದರು. ಬೇರೆ ಸಂದರ್ಭದಲ್ಲಿ ಕೊಳಕಾದ ವಸ್ತ್ರವೇ ಅವರಿಗೆ ಅಪ್ಯಾಯಮಾನ ಎನಿಸುತ್ತಿತ್ತು. ಪೂಜೆ ಮತ್ತು ಹರಕೆಗಳು ಶ್ರೀ ಸಾಮಾನ್ಯನ ದೈನಂದಿನ ಬದುಕು. ಈ ಕಾರಣಕ್ಕಾಗಿಯೇ ಬಹುತೇಕ ಆತ ಸಾಲ ಮಾಡಿಕೊಳ್ಳುತ್ತಿದ್ದ. ಆ ಸಾಲ ತೀರಿಸಲಾಗದೇ ಅದಕ್ಕೆ ಬಡ್ಡಿಯನ್ನು ಕಟ್ಟುವುದರಲ್ಲೆ ಆತನ ಜೀವನ ಪೂರ್ತಿ ಕಳೆದುಹೋಗುತ್ತಿತ್ತು. ಇದು ಮಲೆನಾಡಿನ ಬಡವರ ಮತ್ತು ಶೂದ್ರರ ಜೀವನ ದುರ್ಬಲವಾಗುವುದಕ್ಕೆ ಕಾರಣವಾಗಿತ್ತು.

ಶ್ರೀಮಂತರಾದ ಚಂದ್ರೇಗೌಡರಂತವರು ನೇರವಾಗಿ ದೇವರನ್ನು ಪೂಜಿಸುವ ಬದಲು ವೆಂಕಪ್ಪ ಜೋಯಿಸರ ಮೂಲಕ ಮಾಡಿಸುತ್ತಿದ್ದರು. ಅದರಲ್ಲಿ ಸತ್ಯನಾರಾಯಣ ಪೂಜೆ, ಚಂದ್ರಮೌಳೇಶ್ವರ ಸ್ವಾಮಿಗೆ ಅರ್ಚನೆ, ಅಭಿಷೇಕ ಮಾಡಿಸುವುದು ಮಾಡುತ್ತಿದ್ದರು. ಜೋಯಿಸರಿಗೂ ಈ ಶೂದ್ರ ವರ್ಗದಲ್ಲಿನ ಮೌಢ್ಯವೇ ಇವರ ಅಕ್ಕಿ ಬೇಳೆ. ಅವರು ಉದ್ಧಾರವಾದರೆ, ಬುದ್ಧಿಶಾಲಿಗಳಾದರೆ, ಬ್ರಾಹ್ಮಣವರ್ಗದವರ ಜೀವನ ನಿರ್ವಹಣೆಯು ಕಷ್ಟವಾಗುತ್ತದೆ. ಅದಕ್ಕಾಗಿ ಶೂದ್ರರನ್ನು ಮೌಢ್ಯದಲ್ಲೆ ಇಡುವ ಹಾಗೆ ದೇವರು, ಭೂತಗಳ ವಿಷಯವನ್ನು ಹೇಳಿ ಹೆದರಿಸುತ್ತಿದ್ದರು. ಬಡವರ ಮೌಢ್ಯವನ್ನು ತಮ್ಮ ಅನುಕೂಲಕ್ಕೆ ಬಳಸಿಕೊಳ್ಳುವ ಮೇಲ್ವರ್ಗದವರು ಸದಾ ಒಂದಿಲ್ಲೊಂದು ಪೂಜೆ ಮಾಡುತ್ತಾ ಯಾವುದಾದರೂ ಒಂದು ಪ್ರಸಾದವನ್ನು ತಿರುಪತಿ ಅಥವಾ ಸತ್ಯನಾರಾಯಣ ವ್ರತದ್ದು ಅಥವಾ ಚಂದ್ರಮೌಳೇಶ್ವರನ ವಿಭೂತಿ ಎಂದು ತೆಂಗಿನಕಾಯಿ ಕೊಟ್ಟು ತಮ್ಮ ವ್ಯವಹಾರವನ್ನು ಕುದುರಿಸಿಕೊಂಡು ಜೀವನ ನಡೆಸುತ್ತಿದ್ದರು.

## ಹರಕೆ

ಹರಕೆ ಎಂದರೆ ಯಾರೆ ಒಬ್ಬ ವ್ಯಕ್ತಿ ತಾನೂ ಕಷ್ಟದಲ್ಲಿ ಇದ್ದಾಗ ಅಥವಾ ತೊಂದರೆಯಲ್ಲಿದ್ದಾಗ ಆ ಸಂಕಷ್ಟದಿಂದ ತನ್ನನ್ನು ಪಾರು ಮಾಡು ಎಂದು ದೇವರಲ್ಲಿ ಮೊರೆ ಇಡುವಾಗ, ವಸ್ತುವಿನ ರೂಪದಲ್ಲಿ ಅಥವಾ ಪೂಜೆಯ ರೂಪದಲ್ಲಿ ತಮ್ಮ ಭಕ್ತಿಯನ್ನು ಅರ್ಪಿಸುತ್ತೇನೆ ಎಂದು ಹೇಳಿಕೊಳ್ಳುವುದೆ ಹರಕೆಗಳು. ಮನುಷ್ಯ ಇದ್ದಲ್ಲಿ ದೇವರು ಇರುತ್ತಾರೆ. ದೇವರು ಇದ್ದಲ್ಲಿ ಹರಕೆ ಪೂಜೆ ನಡೆಯುತ್ತದೆ. ಯಾವುದೇ ಧರ್ಮವನ್ನು ನೋಡಿದರು ಅದರಲ್ಲಿ ಈ ಹರಕೆ ಹೊರುವುದು ಮತ್ತು ತೀರಿಸುವುದು ಸಾಮಾನ್ಯ ಕಾರ್ಯಕ್ರಮವಾಗಿರುತ್ತದೆ. ಹರಕೆ ಮತ್ತು ಪೂಜೆಗಳು ಪರಸ್ಪರ ಸಂಬಂಧ ಹೊಂದಿದೆ. ಧರ್ಮಗಳು ಬೇರೆ ಆದಾಗ ಹರಕೆ ತೀರಿಸುವ ಕ್ರಮ ಬೇರೆಯಾಗುತ್ತದೆ. ಕೆಲವು ಧರ್ಮದಲ್ಲಿ ಪ್ರಾಣಿ ಬಲಿ ನೀಡಿದರೆ ಇನ್ನು ಕೆಲವು ಧರ್ಮದಲ್ಲಿ ವಸ್ತುಗಳನ್ನು ಅರ್ಪಿಸುತ್ತಾರೆ. ತಮ್ಮ ಕೇಶವನ್ನು ಅರ್ಪಿಸುವುದು. ಹಣ ಸಂದಾಯ ಮಾಡುವುದು, ದೈಹಿಕ ದಂಡನೆಯನ್ನು ಮಾಡಿಕೊಳ್ಳುವುದು ನಡೆಯುತ್ತದೆ.

ವಾಸ್ತವವಾಗಿ ಹರಕೆ ಮನುಷ್ಯನಿಗೆ ಮಾನಸಿಕ ನೆಮ್ಮದಿಯನ್ನು ತಂದು ಕೊಡುತ್ತದೆ. ಹರಕೆ ಹೊರುವ ಸಂದರ್ಭದಲ್ಲಿ ವ್ಯಕ್ತಿ ಅದನ್ನು ತೀರಿಸುವ ಸಾಮರ್ಥ್ಯ ಇರಬೇಕು ಎಂದೇನೂ ಇಲ್ಲ. ಆತನ ಯಥಾಶಕ್ತಿಯ ಆಧಾರದ ಮೇಲೆ ಅದನ್ನು ಹೊರುತ್ತಾನೆ. ಎಲ್ಲಾ ಬೇಡಿಕೆಗಳಿಗೂ ಒಂದೇ ರೀತಿಯ ಮಾರ್ಗವಲ್ಲ. ವೈವಿಧ್ಯಮಯವಾದ ಹರಕೆ ಇರುತ್ತದೆ. ಈ ಕಾದಂಬರಿಯಲ್ಲಿಯೂ ಹರಕೆ ಮತ್ತು ಪೂಜೆಗಳು ಪ್ರಮುಖ ಪಾತ್ರವಹಿಸುತ್ತದೆ. ಹರಕೆಯು ವ್ಯಕ್ತಿ ಮತ್ತು ಸಂದರ್ಭವನ್ನು ಅವಲಂಬಿಸಿದೆ. ಪೂಜೆ ಹಾಗಲ್ಲ. ಅದು ದಿನ ನಿತ್ಯದ ಕಾಯಕ ಕಾದಂಬರಿಯಲ್ಲಿ ಬರುವ ಪ್ರತಿ ಕುಟುಂಬವು ತಮ್ಮ ಸಂಕಷ್ಟದ ಕಾಲದಲ್ಲಿ ಹರಕೆಯನ್ನು ಹೊರುತ್ತವೆ. ಈ ಮೂಲಕ ಜವಾಬ್ದಾರಿಯನ್ನು ದೇವರಿಗೂ ವರ್ಗಾಯಿಸಿ ಪರಿಹಾರಕ್ಕೆ ಎದುರು ನೋಡುತ್ತವೆ.

ಗ್ರಾಮಗಳಲ್ಲಿ ಪ್ರತಿವರ್ಷ ಸಾಮೂಹಿಕವಾಗಿ ಹರಕೆಯ ಆಚರಣೆ ಮಾಡುತ್ತಾರೆ. ಆ ಸಂದರ್ಭದಲ್ಲಿ ತಮ್ಮ ಬಂಧು ಬಾಂಧವರನ್ನು, ಮಿತ್ರರನ್ನು ಕರೆಯುತ್ತಾರೆ. ಎಲ್ಲಾರೂ ಒಟ್ಟಾಗಿ ಸೇರಿ ತಮ್ಮ ಸುಖದುಃಖ ಹೇಳಿಕೊಂಡು ಭೂರಿ ಭೋಜನ ಮಾಡುತ್ತಾರೆ. ಇದನ್ನು ಬಹಳ ವಿಜ್ರಂಭಣೆಯಿಂದ ಆಚರಿಸುತ್ತಾರೆ. ಬಡವನಾದವನು ಸಾಲಮಾಡಿ ಆಚರಿಸಿದರೆ, ಕೆಲವು ಸಾರಿ ಸಾಲ ಸಿಗಲಿ ಎಂದೆ ಹರಕೆ ಹೊರುವವರು ಇದ್ದಾರೆ. ಒಟ್ಟಾರೆ ಇದು ಮನಸ್ಸಿಗೆ ನೆಮ್ಮದಿ, ಸಂತೋಷ ನೀಡುವ ಸಂದರ್ಭ. ಆದರೂ ಕೆಲವು ಕುಟುಂಬಗಳ ಹರಕೆ ತೀರಿಸುವ ಸಲುವಾಗಿ ಸಾಲ ಮಾಡಿಕೊಂಡು ಬಡವರಾಗುತ್ತಾರೆ.

ಗ್ರಾಮಗಳಲ್ಲಿ ಅಲ್ಲಿನ ಮುಖಂಡನು ಗ್ರಾಮದ ಉದ್ದಾರಕ್ಕಾಗಿ ಹರಕೆ ಹೊರುತ್ತಾನೆ. ಅವನ ಉದ್ದೇಶ ನೈಸರ್ಗಿಕ ವಿಕೋಪಗಳಾದ ಮಹಾಪೂರ, ಬಿರುಗಾಳಿ, ಚಂಡಮಾರುತ, ಅತೀವೃಷ್ಟಿ, ಅನಾವೃಷ್ಟಿ, ಭೂಕಂಪ ಮತ್ತು ಕ್ರೂರ ಪ್ರಾಣಿಗಳಿಂದಾಗುವ ತೊಂದರೆಗಳನ್ನು ಎದುರಿಸಲು ಅಗೋಚರ ಶಕ್ತಿ ಅಂದರೆ ದೈವ ಅಥವಾ ದೇವರುಗಳ ಮನವಲಿಸಿಕೊಳ್ಳಲು ರೂಢಿಯಲ್ಲಿ ಇರುವ ಮಾರ್ಗಗಳು ಹರಕೆಗಳು. ಈ ಉದ್ದೇಶಕ್ಕಾಗಿ ಆತ ಹರಕೆ ಹೊರುತ್ತಾನೆ. ಈ ಕಾದಂಬರಿಯ ಪ್ರತಿ ಭಾಗದಲ್ಲು ಅಂದರೆ ಸಮಸ್ಯೆಗಳು ಎದುರಾದಾಗಲೆಲ್ಲ ಹರಕೆ ಹೊರುವುದನ್ನು ಕಾಣುತ್ತೇವೆ. ಸೀತೆಯ ವಿಚಾರದಲ್ಲಿ ಮನೆಯ ಮೇಲಿನ ಸೂರಿನ ತುಂಬೆಲ್ಲ ಹರಕೆಗಾಗಿ ತೆಗೆದಿರಿಸಿದ ಕಾಸುಗಳ ಗಂಟೆ ಕಾಣಿಸುತ್ತಿದ್ದವು ಎಂದು ಲೇಖಕರು ಬರೆಯುತ್ತಾರೆ. ಇದಕ್ಕೆ ಹೂವಯ್ಯ, ರಾಮಯ್ಯರು ಹೊರತಾಗಿರಲಿಲ್ಲ.

ಒಟ್ಟಾರೆ ಈ ರೀತಿಯ ಆಚರಣೆ ತಾತ್ಕಾಲಿಕವಾಗಿ ನೊಂದ ಮನಸ್ಸಿಗೆ ಸಮಾಧಾನ ತಂದು ಕೊಡುತ್ತಿದ್ದವು. ಕೆಲವು ಸಾರಿ ಕಾಕತಾಳಿಯವೋ ಎಂಬಂತೆ ಅವರ ಆಸೆ ಈಡೇರುತ್ತಿತ್ತು. ಇನ್ನು ಕೆಲವು ಸಾರಿ ಅದು ಸಾಧ್ಯವಾಗದಿದ್ದರೂ ಅವರಿಂದ ಯಾವುದೇ ಬೇಸರವಾಗುತ್ತಿರಲಿಲ್ಲ. ಬೇರೊಂದು ಹೊಸ ಹರಕೆಯನ್ನು ಹೇಳಿಕೊಳ್ಳುತ್ತಿದ್ದರು. ಹೀಗೆ ಮರಳಿ ಯತ್ನ ಮಾಡುತ್ತಲೆ ಇರುತ್ತಿದ್ದರು. ಅಂತಿಮವಾಗಿ ಇವರ ಬಯಕೆ ಯಾವ ಹರಕೆಯಿಂದ ಸಾಫಲ್ಯವಾಯಿತು ಎಂಬುದೆ ಅವರಿಗೆ ತಿಳಿದಿರುವುದಿಲ್ಲ. ಅಷ್ಟೊಂದು ದೊಡ್ಡ ಪಟ್ಟಿ ಅವರ ಮುಂದಿರುತ್ತಿದ್ದವು. ಇದು ನಿರಂತರ.

# ಅಧ್ಯಾಯ 7

## ಉಪಸಂಹಾರ

ಕುವೆಂಪು ಅವರ ಕಾದಂಬರಿ ಕಾನೂರು ಹೆಗ್ಗಡತಿ ಹಲವು ವಿಶೇಷತೆಗಳನ್ನು ಹೊಂದಿದೆ. ಸ್ವತಂತ್ರ್ಯ ಪೂರ್ವ ಕಾಲದ ಸಾಮಾಜಿಕ ಚಿತ್ರಣವನ್ನು ಆ ಕಾಲದ ಮನುಷ್ಯ ಸ್ವಭಾವಗಳನ್ನು ಮನೋಭಿಜ್ಞವಾಗಿ ಚಿತ್ರಿಸಿದ್ದರೆ ಪ್ರತಿಯೊಂದು ಪ್ರದೇಶದಲ್ಲಿಯೂ ಸ್ಥಳೀಯರು ಅಥವಾ ಮೂಲ ನಿವಾಸಿಗಳದ್ದು ಅವರೊಂದಿಗೆ ಹೊರಗಿನಿಂದ ಹಲವು ಕಾರಣಗಳಗಾಗಿ ವಲಸೆ ಬಂದವರು ಇರುತ್ತಾರೆ. ಆ ಎರಡು ಸಮೂಹಗಳಲ್ಲಿ ಭಿನ್ನವಾದ ಆಚರಣೆ ಸಂಸ್ಕೃತಿ, ಆಹಾರ ಪದ್ಧತಿ, ಉಡಿಗೆ ತೊಡಿಗೆ, ಸಂಪ್ರದಾಯಗಳು ಇರುತ್ತವೆ. ಆದರೂ ಆ ಎರಡು ಉಪಗುಂಪುಗಳ ನಡುವೆ ಪರಸ್ಪರ ಸಹಕಾರಯುತ ಜೀವನ ನಡೆದುಕೊಂಡು ಹೋಗುವುದು ಸಹಜ. ಹಾಗೆಯೇ ಇಲ್ಲಿಯೂ ಮೂಲ ನಿವಾಸಿಗಳಾಗಿ ಮಲೆನಾಡಿನ ಶ್ರೀ ವೈಷ್ಣವ ನಾಮಧಾರಿ ಗೌಡ ಜನಾಂಗವಿದ್ದರೆ ವಲಸಿಗರಾಗಿ ದಕ್ಷಿಣ ಕನ್ನಡ ಮೂಲದ ರಂಗಪ್ಪಸೆಟ್ಟಿ, ಗಂಗೆ, ಬೇಲರಬೈರ, ಸುಕ್ರಾ, ಸೇಸಿ, ಸಿದ್ಧ, ಕೆಂಚ ಹಾಗೂ ಸಹ್ಯಾದ್ರಿ ಪರ್ವತ ಶ್ರೇಣಿಯ ತಪ್ಪಲಿನಲ್ಲಿರುವ ಮತ್ತೊಂದು ಜನಾಂಗ ಹಳೆ ಪೈಕ ಎಂಬ (ಆದರೆ ಇಂದು ಈ ಹೆಸರಿನಿಂದ ಆ ಜನಾಂಗವನ್ನು ಸಂಬೋಧಿಸುತ್ತಿಲ್ಲ. ಬದಲಾಗಿ ಈಡಿಗಾ ಎಂದು ಕರೆಯುತ್ತಾರೆ) ಈ ಜನಾಂಗಗಳು ಒಟ್ಟಾಗಿ ವಾಸಿಸುತ್ತಿರುವುದು ಹಾಗೂ ಇವುಗಳ ನಡುವೆ ಮುಖ್ಯವಾಗಿ ಹಳೆ ಪೈಕ ಮತ್ತು ಗೌಡ ಜನಾಂಗದ ನಡುವೆ ತಾವು ಮೇಲು ತಾವು ಮೇಲು ಎಂಬ ಹೋರಾಟ ಕೂಡ ಕಂಡು ಬರುತ್ತದೆ. ಅದನ್ನು ಕುವೆಂಪುರವರು ಮಲೆಗಳಲ್ಲಿ ಮದುಮಗಳು ಕಾದಂಬರಿಯಲ್ಲಿ ವಿವರಿಸುತ್ತಾರೆ.

ಕಾದಂಬರಿಯ ಮೂಲ ಕಥಾವಸ್ತು ಕೌಟಂಬಿಕ ಬಿಕ್ಕಟ್ಟು ಎಂಬುದು ಮುಖ್ಯವಾದದು. ಈ ಕಾದಂಬರಿಯಲ್ಲಿ ಬರುವ ಕುಟುಂಬಗಳ ಬಿಕ್ಕಟ್ಟಿಗೆ ಆರ್ಥಿಕ ಅಂಶವೇ ಮೂಲಕಾರಣ. ಜೊತೆಗೆ ಸಾಮಾಜಿಕ ವಿಷಯಗಳು ಮುಖ್ಯವಾಗುತ್ತವೆ. ಆದರೆ ಮೇಲುನೋಟಕ್ಕೆ ಈ ವಿಷಯಗಳು ಅರಿವಿಗೆ ಬಾರದಿದ್ದರು ಆಳದಲ್ಲಿ ಪ್ರಮುಖ ಪಾತ್ರ ವಹಿಸುವುದೇ ಆರ್ಥಿಕ ವಿಷಯಗಳು. ನಾವು ಕಾದಂಬರಿಯನ್ನು ಅರ್ಥಮಾಡಿಕೊಳ್ಳುತ್ತ ಹೋಗುವಾಗ ಒಂದು ಶ್ರೀಮಂತ ಕುಟುಂಬದ ಯಜಮಾನನ ಸ್ಥಾನಕ್ಕೆ ಇರುವ ಪೈಪೋಟಿಗಳು, ಬಲಾತ್ಕಾರವಾಗಿ ಯುವ ಜನಾಂಗದ ಆಶೋತ್ತರಗಳನ್ನು ಹತ್ತಿಕ್ಕುವುದು. ಅದು ಕೇವಲ ಹೂವಯ್ಯ ಮತ್ತು ರಾಮಯ್ಯರವರ ವಿದ್ಯಾಭ್ಯಾಸದಲ್ಲಿ ಮಾತ್ರವಾಗಿರದೆ, ಸೀತೆಯಾಗಿರಬಹುದು, ಚಿನ್ನಯ್ಯ, ಓಬಯ್ಯಗೌಡ, ಕೃಷ್ಣಪ್ಪ, ಹೀಗೆ ಯಾವುದೇ ಯುವಕರ ಪಾತ್ರವನ್ನು ತೆಗೆದುಕೊಂಡರು ಅಲ್ಲಿ ಅವರ ಚಿಂತನೆಗೆ, ಅವರ ದೃಷ್ಟಿಕೋನಕ್ಕೆ, ನಿರ್ಧಾರಕ್ಕೆ ಆಚರಣೆಗೆ ಕವಡೆ ಕಾಸು ಕಿಮ್ಮತ್ತು ಎಂಬುದು ಇಲ್ಲವೇ ಇಲ್ಲ. ಹಾಗಾಗಿ ಕೇವಲ ವಯಸ್ಕರ ನಿರ್ಧಾರವೆ ಮುಖ್ಯವಾಗುತ್ತದೆ.

ಈ ಮೇಲೆ ಹೇಳಿದ ಹಾಗೆ ಆರ್ಥಿಕ ವಿಷಯಗಳು ಕಾದಂಬರಿಯ ಉದ್ದಕ್ಕೂ ತಮ್ಮ ಪ್ರಭಾವ ಬೀರುತ್ತವೆ. ಅವರು ವಾಸಿಸುವ ಸ್ಥಳಗಳಿಗೆ ಹೆಸರು ಸೂಚಿಸುವುದು ಕೂಡ ಆರ್ಥಿಕ ಅಂಶಗಳ ಆಧಾರದ ಮೇಲೆ. ಅಂದರೆ ಶ್ರೀಮಂತರು ವಾಸಿಸುವ ಸ್ಥಳವನ್ನು ಮನೆ ಎಂದು ಕರೆದರೆ, ಬಡವರು ವಾಸಿಸುವ ಸ್ಥಳವನ್ನು ಬಿಡಾರ, ಗುಡಿಸಲು ಹೀಗೆ ಕರೆಯುತ್ತಾರೆ. ಒಂದು ಪ್ರಸಿದ್ಧ ಪದೋಕ್ತಿ ಹೇಳುವ ಹಾಗೆ "ಹಣ ಎಂದರೆ ಹೆಣವು ಬಾಯಿ ಬಿಡುತ್ತದೆ" ಹಣದಿಂದ ಅಥವಾ ಶ್ರೀಮಂತಿಕೆಯಿಂದ ದೂರವಾಗಿ ಮುಕ್ತನಾಗಿರಬೇಕಾದರೆ ಆತ ಒಂದೇ ದೇವರಾಗಿರಬೇಕು ಇಲ್ಲವೇ ದೆವ್ವವಾಗಿರಬೇಕು" ಎಂಬುದು.

ಮೊದಲಿನ ಹೇಳಿಕೆಗೆ ಸೂಕ್ತ ವ್ಯಕ್ತಿಯೇ ಚಂದ್ರೇಗೌಡ. ಈತ ತನ್ನ ಅಣ್ಣನ ಮಗನನ್ನು ಮನೆಯಿಂದ ಬೇರೆ ಮಾಡುವಾಗ ಆತ ಆಡುವ ನಾಟಕ ಅದಕ್ಕಾಗಿ ಆತನ ಪೂರ್ವ ತಯಾರಿ ಗಮನಾರ್ಹ. ಅಷ್ಟೆ ಅಲ್ಲದೆ ಮನೆ ಹಿಸ್ಸೆಯಾಗುತ್ತದೆ ಎಂದಾಗ ಕೆಲಸದವರು ತಮ್ಮ ತಮ್ಮ ವಸ್ತುಗಳನ್ನು ಅಡಗಿಸಿಡುವುದು, ಮನೆಯ ಮಹಿಳೆಯರು ತಮ್ಮ ವಸ್ತುಗಳನ್ನು ಜೋಪಾನ ಮಾಡಿಡುವುದು, ಯಾವುದೂ ಕೂಡ ಆಶ್ಚರ್ಯ ಹುಟ್ಟಿಸುವುದಿಲ್ಲ. ಬದಲಾಗಿ ತಮ್ಮೊಳಗಿನ ಪಾತ್ರಗಳೆ ಚಟುವಟಿಕೆಯಲ್ಲಿ ತೊಡಗಿವೆ ಎಂಬಂತೆ ಅನಿಸುತ್ತದೆ. ಅದೇ ರೀತಿ ಸಾಟಿ ಪದ್ಧತಿಯು ಆಚರಣೆಯಲ್ಲಿ ಇತ್ತು ಎಂಬುದಕ್ಕೆ ಕಳ್ಳಂಗಡಿಯವನೆ ಸಾಕ್ಷಿ.

ಕಾದಂಬರಿಕಾರರು ಓಬಯ್ಯಗೌಡನ ಮೂಲಕ ಒಂದು ಮೂಢನಂಬಿಕೆಯನ್ನು ಹೊಡೆದು ಹಾಕಿದ್ದಾರೆ. ಅಂದರೆ ದೇವರ ಮೀನನ್ನು ಹಿಡಿಯುವುದು ನಿಷೇಧ. ಅದನ್ನು ಹಿಡಿದು ತಿಂದರೆ ವಾಂತಿ ಭೇಧಿಯಾಗಿ ದೇವರ ಅವಕೃಪೆಗೆ ಪಾತ್ರವಾಗಿ ಮರಣ ಹೊಂದುತ್ತಾರೆ ಎಂಬ ಜನಪ್ರಿಯ ನಂಬಿಕೆಯ ಮುಖವಾಡ ಕಳಚಿದ್ದಾರೆ. ಕಾದಂಬರಿಯಲ್ಲಿ ಓಬಯ್ಯಗೌಡ ದೇವರ ಮೀನು ಹಿಡಿದುಕೊಂಡು ಬಂದು ಕಳ್ಳಂಗಡಿಯಲ್ಲಿ ಮಾರಾಟ ಮಾಡಿ ಬಂದ ಹಣದಲ್ಲಿ ಕಳ್ಳು ಕುಡಿದು ಹೋಗುತ್ತಾನೆ. ಕಳ್ಳಂಗಡಿಯವನು ಅದೇ ಮೀನನ್ನು ಪದಾರ್ಥವಾಗಿ ತಯಾರಿಸಿ ಬೇರೆಯವರಿಗೆ ಮಾರಾಟ ಮಾಡುತ್ತಾನೆ. ಅಲ್ಲಿ ಅದನ್ನು ತಿಂದವರಿಗೆ ಏನು ಸಂಭವಿಸುವುದೇ ಇಲ್ಲ. ಈ ಮೂಲಕ ಮೂಢನಂಬಿಕೆಗೆ ತಿಲಾಂಜಲಿ ಇಟ್ಟಿದ್ದಾರೆ.

ಎರಡನೆಯ ಹೇಳಿಕೆಗೆ ಸಾಕ್ಷಿ ಹೂವಯ್ಯ. ಅಂದರೆ ಹಣವನ್ನು ಬೇಡ ಎನ್ನುವ ವ್ಯಕ್ತಿ ದೇವರು ಅಥವಾ ದೆವ್ವವಾಗಿರಬೇಕು ಎಂಬುದಕ್ಕೆ ಹೂವಯ್ಯನನ್ನು ಉದಾಹರಿಸ ಬಹುದು. ಆತನಿಗೆ ಹಣದ ಬಗ್ಗೆ ಅಷ್ಟೊಂದು ವ್ಯಾಮೋಹವಿಲ್ಲ. ಚಂದ್ರೇಗೌಡರಿಗೆ ಅವನನ್ನು ಹೋಲಿಸಿದರೆ ಹೂವಯ್ಯ ದೇವರೆ ಸರಿ. ತನಗೆ ವಾಸ್ತವವಾಗಿ ಬರಬೇಕಾದ ಆಸ್ತಿಯ ಪಾಲು ಬರದೆ ಇದ್ದಾಗ ಬೇರೆಯವರು ಒತ್ತಡದ ಮೂಲಕ ಪಡೆದುಕೊಳ್ಳಲು ತಿಳಿಹೇಳಿದ್ದರೂ ಕೂಡ ಹೂವಯ್ಯ ಆ ಬಗ್ಗೆ ಯೋಚಿಸುವುದೇ ಇಲ್ಲ. ಆತನ ಪ್ರಕಾರ ನಿಜವಾದ ಸುಖ ಇರುವುದು ಶ್ರೀಮಂತಿಕೆಯಲ್ಲಲ್ಲ. ಬದಲಾಗಿ ಹೃದಯದಲ್ಲಿ ಎಂದು ಹೇಳುತ್ತಾನೆ. ಆ ವಿಚಾರದಲ್ಲಿ ಆತನನ್ನು ಎಷ್ಟು ನಂಬಬಹುದು ಎಂದರೆ ಸ್ವತಃ ಸುಬ್ಬಮ್ಮಳೆ ಚಂದ್ರೇಗೌಡರ ಮನೆಯಿಂದ ತಂದ ಆಭರಣಗಳನ್ನು ಹೂವಯ್ಯನ ಹತ್ತಿರ ಇಡುತ್ತಾಳೆ. ಆ ಸಂದರ್ಭದಲ್ಲಿ ಅವನನ್ನು ಅವುಗಳ ವ್ಯಾಮೋಹ ಕಾಡುವುದಿಲ್ಲ. ಹಾಗಾಗಿ ಮರಳಿ ಸುಬ್ಬಮ್ಮ ಒಡವೆಗಳನ್ನು ಕೇಳಿದಾಗ ಹೂವಯ್ಯ ಮರಳಿಸುತ್ತಾನೆ.

ಹಾಗೆಯೇ ಕಾದಂಬರಿಯಲ್ಲಿ ಬರುವ ಕುಟುಂಬಗಳಲ್ಲಿ ಬಳಸುವ ಕೌಟುಂಬಿಕ ಸಾಮಗ್ರಿಗಳನ್ನು ತೆಗೆದುಕೊಂಡಾಗಲೂ ಇಲ್ಲಿ ಶ್ರೀಮಂತರು ಬಡವರು ಎಂಬ ಭೇದವಿಲ್ಲ. ಬದಲಾಗಿ ಜಾತಿ ಪ್ರಭಾವ ಬೀರುತ್ತದೆ. ಅಂದರೆ ಶೂದ್ರರು ಮತ್ತು ಬ್ರಾಹ್ಮಣರು ಎಂದು ವರ್ಗೀಕರಿಸುವುದು ಸೂಕ್ತ ಎನಿಸುತ್ತದೆ. ಏಕೆಂದರೆ ಶೂದ್ರರು ಬಳಸುವ ಪಾತ್ರೆಗಳೆಲ್ಲವು ಮಣ್ಣಿನ, ಕಲ್ಲಿನ ಮತ್ತು ಮರದ ಪಾತ್ರೆಗಳನ್ನು ಬಳಸುತ್ತಾರೆ. ಇದೇ ಸಂದರ್ಭದಲ್ಲಿ ಬ್ರಾಹ್ಮಣರನ್ನು ತೆಗೆದುಕೊಂಡರೆ ಅವರು ಹಿತ್ತಾಳೆ, ಕಂಚು, ತಾಮ್ರ ಮೊದಲಾದ ಲೋಹದ ಪಾತ್ರೆಗಳನ್ನು ಬಳಸುತ್ತಾರೆ. ಇಲ್ಲಿ ಮುಖ್ಯವಾಗಿ ಗಮನಿಸಬೇಕಾದದ್ದು ಗೌಡ ಜನಾಂಗದವರು ಲೋಹಗಳ ಪಾತ್ರೆಯನ್ನು ಬಳಸುವುದೇ ಇಲ್ಲವೇ? ಎಂಬ ಪ್ರಶ್ನೆಗೆ ಬಳಸುತ್ತಾರೆ. ಆ ಪ್ರಮಾಣ ಕಡಿಮೆ ಎನ್ನಬಹುದು. ಇದಕ್ಕೆ ಉದಾಹರಣೆಯಾಗಿ ಚಿನ್ನಯ್ಯನ ತಾಯಿ ಗೌರಮ್ಮ ಹಿತ್ತಾಳೆಯ ತಂಬಿಗೆಯಲ್ಲಿ ಹಾಲು ಕರೆದು ತರುತ್ತಿದ್ದರು ಎಂಬ ಉಲ್ಲೇಖ ಇದೆ. ಅದೇ ರೀತಿ ಮನೆಯ ಹಿಸ್ಸೆಯಾಗುವ ಸಂದರ್ಭದಲ್ಲಿ ಈ ಪಾತ್ರೆಗಳನ್ನು ಉಲ್ಲೇಖಿಸುತ್ತಾರೆ.

ಇನ್ನು ವಿವಾಹದ ಪರಿಕಲ್ಪನೆಯನ್ನು ತೆಗೆದುಕೊಂಡಾಗ ಇಲ್ಲಿ ಜಾತಿ ಮತ್ತು ಅಂತಸ್ತು (ಶ್ರೀಮಂತಿಕೆ) ಪ್ರಭಾವ ಬೀರುತ್ತದೆ. ಜಾತಿಯ ವಿಷಯಕ್ಕೆ ಬಂದಾಗ ಶೂದ್ರವರ್ಗದವರ ವಿವಾಹಗಳೆಲ್ಲವು ಆ ಕಾಲದಲ್ಲಿ ರಾತ್ರಿಯೇ ನಡೆಯುತ್ತಿದ್ದದ್ದು ವಿಶೇಷ. ಜೋಯಿಸರುಗಳು ಇದಕ್ಕೆ ಕಾರಣವಾಗಿರಲೂ ಬಹುದು ಎನ್ನುವ ಅನುಮಾನ ಕಾಡದಿರದು. ಏಕೆಂದರೆ ಇಂದಿಗೂ ಪಂಚಾಗದಲ್ಲಿ ರಾತ್ರಿ ಮುಹೂರ್ತ ಇರುವುದು ಕಂಡುಬರುತ್ತದೆ. ಆದರೆ ಆ ಲಗ್ನದಲ್ಲಿ ಯಾರು ವಿವಾಹವಾಗುತ್ತಿಲ್ಲ. ಇದ್ದಿದ್ದರಲ್ಲಿ ಬ್ರಾಹ್ಮಣ ವರ್ಗದ ಕೆಲವು ಗೋತ್ರದವರು ಗೋಧೂಳಿ ಲಗ್ನ ಅಂದರೆ ಸೂರ್ಯಾಸ್ತಮದ ಸಮಯ ಆ ಗಳಿಗೆಯಲ್ಲಿ ಕೆಲವು ವಿವಾಹ ನಡೆಯುವುದು ಅಲ್ಲೊಂದು ಇಲ್ಲೊಂದು ಕಂಡು ಬರುತ್ತದೆ. ಆ ಕಾಲಘಟ್ಟದಲ್ಲಿ ಗಂಡು ಹೆಣ್ಣಿನ ಮನೆಗಳ ಅಂತರ ಹತ್ತಾರು ಮೈಲಿಗಳದ್ದು ಸಂಪರ್ಕ ವಾಹನಗಳಾಗಿ ಕೇವಲ ಎತ್ತಿನಗಾಡಿ. ಕೆಲವು ಸಾರಿ ದಂಡಿಗೆಗಳು ಅಂದರೆ ನಾಲ್ಕು ಜನ ಹೊತ್ತುಕೊಂಡು ನಡೆಯುವುದು ಇವು ಯಾವುದು ಇಲ್ಲದಿದ್ದರೆ ಕಾಲ್ನಡಿಗೆಯೇ ಪ್ರಧಾನವಾಗಿರುತ್ತಿತ್ತು. ಆದ್ದರಿಂದ ಹೆಣ್ಣಿನ ಮನೆಗೂ ಅಥವಾ ಗಂಡಿನ ಮನೆಗೂ ದಿಬ್ಬಣ ಬರುವಾಗಲೇ ರಾತ್ರಿಯಾಗುತ್ತಿತ್ತು. ಆದ್ದರಿಂದ ಜೋಯಿಸರು ನಿಷಾ ಲಗ್ನಕ್ಕೆ ಮುಹೂರ್ತ ಇಟ್ಟುಕೊಡುತ್ತಿದ್ದರು. ಆದ್ದರಿಂದ ರಾತ್ರಿಯು ಮದುವೆ ನಡೆಯುತ್ತಿತ್ತು. ಆ ಕಾಲದಲ್ಲಿ ಮಲೆನಾಡು ಪ್ರದೇಶದಲ್ಲಿ ಬಹುತೇಕ ಅವಿಭಕ್ತ ಕುಟುಂಬಗಳೆ ಹೆಚ್ಚಾಗಿದ್ದು ಪ್ರತಿಯೊಂದು ಮನೆಯು ಒಂದು ಛತ್ರದ ರೀತಿ ಇರುತ್ತಿದ್ದವು. ಹಾಗಾಗಿ ಆಮಂತ್ರಿತರು ಯಾವುದೇ ಅಂಜಿಕೆ ಇಲ್ಲದೆ ಉಳಿದುಕೊಳ್ಳಬಹುದಿತ್ತು. ಈ ಎಲ್ಲಾ ಅಂಶಗಳೊಂದಿಗೆ ಮನರಂಜನೆ ಆ ಕಾಲದಲ್ಲಿ ವಿರಳವಾಗಿತ್ತು. ಅಂತಹ ಸಂದರ್ಭದಲ್ಲಿ ವಿವಾಹವೆ ಒಂದು ಮನರಂಜನೆಯಾಗಿತ್ತು. ಅದರಲ್ಲಿನ ಶಾಸ್ತ್ರಗಳು, ಹಾಡುಗಳು ಮನಸ್ಸಿಗೆ ಸಂತೋಷ ಉಂಟುಮಾಡುತ್ತಿತ್ತು. ಅದನ್ನು ಎಲ್ಲಾರೂ ಅನುಭವಿಸಲು ಸಾಧ್ಯವಾಗುವುದು ರಾತ್ರಿ ಮಾತ್ರ. ಹಾಗಾಗಿ ಈ ಹೊತ್ತಿನಲ್ಲಿಯೇ ವಿವಾಹ ನಡೆಯುತ್ತಿತ್ತು. ಒಟ್ಟಾರೆ ಎರಡು ವಿಭಿನ್ನ ಪ್ರಕಾರದ ಮದುವೆಯ ಪರಿಚಯ ಕಾದಂಬರಿಯಲ್ಲಾಗುತ್ತದೆ.

ಕುವೆಂಪುರವರು ಸ್ತ್ರೀಯರ ಮೇಲೆ ಮೃದುಧೋರಣೆಯನ್ನು ತೋರಿರುವುದು ಕಾಣುತ್ತದೆ. ಅಂದರೆ ಸ್ತ್ರೀಯನ್ನು ಸುಖ ಸಂತೋಷದಲ್ಲಿ ಇರಲು ಬಿಡದೆ ವ್ಯಕ್ತಿ ಸಾವಿನಲ್ಲು ನರಳುತ್ತಾನೆ. ಅವನಿಗೆ ಸುಲಭ ಸಾವು ಲಭ್ಯವಾಗುವುದಿಲ್ಲ. ಇನ್ನೊದೆಡೆ ಪುರುಷ ಪ್ರಧಾನವಾದ ಸಮಾಜವನ್ನು ಅವರು ಬಿಟ್ಟು ಕೊಟ್ಟಿಲ್ಲ. ಚಂದ್ರಯ್ಯಗೌಡರೂ ಸಾವು ಸಂಭವಿಸಿದಾಗ ಕದಿನಿ ಹಾರಿಸಿ, ಗರ್ನಾಲು ಸಿಡಿಸಿ ಅದೊಂದು ವಿರೋಚಿತ ಸಾವು, ಸುತ್ತಲಿನ ಹಳ್ಳಿಗೆಲ್ಲ ತಿಳಿಯಲಿ ಎಂದು ಪಟಾಕಿ ಹಾರಿಸುವವರು. ಸುಬ್ಬಮ್ಮಳ ಸಾವು ಸಂಭವಿಸಿದಾಗ ಈ ಮೇಲಿನ ರೀತಿಯು ಪುನರಾವರ್ತನೆ ಆಗುವುದಿಲ್ಲ. ಅವಳದು ಅವಮಾನಕರವಾದ ಸಾವು. ಆಕೆ ಅನೈತಿಕತೆಗೆ ಬಲಿಯಾಗಿದ್ದಾಳೆ. ಚರಿತ್ರೆ ಹೀನೆಗೆ ಇಂತಹ ಸಾವೆ ಬರುವುದು ಎಂಬ ಸಂದೇಶ ಸಮಾಜಕ್ಕೆ ನೀಡುತ್ತಾರೆ. ಇಲ್ಲಿ ಒಬ್ಬ ಪುರುಷನಿಂದಲೇ ಅವಳಿಗೆ ಈ ಸ್ಥಿತಿ ಬಂದಿದೆ ಆದರೆ ಇದಕ್ಕೆ ಆಕೆ ಮಾತ್ರ ಜವಾಬ್ದಾರಳಲ್ಲ ಎಂಬುದನ್ನು ಮರೆತಂತಿದೆ.

ಒಟ್ಟಾರೆ ಯಾವುದೇ ಜಾತಿ, ಪಂಗಡ, ಮತ, ಧರ್ಮವಾದರೂ ಹಾಗೆಯೇ ಗ್ರಾಮೀಣ ಪ್ರದೇಶವಾಗಿರಬಹುದು ನಗರ ಪ್ರದೇಶವಾಗಿರಬಹುದು ಎಲ್ಲಿಯೇ ಆದರೂ ಕುಟುಂಬದ ಆಚಾರ, ವಿಚಾರ, ಸಂಸ್ಕೃತಿ, ದೃಷ್ಟಿಕೋನ, ಆಶಯಗಳು ಎಲ್ಲಾವನ್ನು ನಿರ್ದೇಶಿಸುವುದು ಆಯಾ ಕುಟುಂಬದ ಆರ್ಥಿಕ ಅಂಶಗಳು. ಆದ್ದರಿಂದ ನಾವು ಆಯ್ದುಕೊಂಡ ಕುಟುಂಬದ ಪ್ರತಿನಿಧಿಕರಣದ ಅಧ್ಯಯನದೊಳಗೆ ಬರುವ ಪಾತ್ರಧಾರಿಗಳಾಗಿರಬಹುದು. ಸಂಕೇತಗಳಾಗಿರಬಹುದು ಅವೆಲ್ಲದರ ವರ್ತನೆ ಮತ್ತು ಇರುವಿಕೆಯನ್ನು ಪ್ರತಿನಿಧಿಸುವುದು ಆರ್ಥಿಕ ಅಂಶಗಳೇ ಜೊತೆಯಲ್ಲಿ ಸಾಮಾಜಿಕ ಅಂಶಗಳು ಅವುಗಳಿಗೆ ಆಧಾರ ಒದಗಿಸುತ್ತದೆ. ಇಲ್ಲಿ ಕಾನೂರು ಹೆಗ್ಗಡತಿ ಕಾದಂಬರಿಯಲ್ಲಿ ಕುಟುಂಬದ ಪ್ರತಿನಿಧಿಕರಣ ಎಂದಾಗ ಒಂದು ಕಟುಂಬದ ಮಲೆನಾಡಿನ ಎಲ್ಲಾ ವಿಷಯಗಳನ್ನು ಪತಿನಿಧಿಸುತ್ತದೆ ಎಂಬುದೇ ಆಗಿದೆ. ಒಂದು ಕುಟುಂಬದ ವಾರ್ಷಿಕ ಜೀವನ ಕ್ರಮ ಇಲ್ಲಿ ಚಿತ್ರಿತವಾಗಿದೆ.

ಸದಸ್ಯರು ಹೇಗೆ ವರ್ತಿಸುತ್ತಾರೆ, ಆ ವರ್ತನೆ ಅವರದು ಸಹಜ ಸ್ವಭಾವವೇ ಅಥವಾ ರೂಢಿಸಿ ಕೊಂಡಿರುವುದೆ ಅದೇ ರೀತಿ ವರ್ತಿಸಲು ಕಾರಣ ಈ ಎಲ್ಲಾ ಪ್ರಶ್ನೆಗಳಿಗೆ ಉತ್ತರವನ್ನು ಕಂಡು ಹಿಡಿಯುವಾಗಲೂ ದೊರೆತಿರುವುದು ಆರ್ಥಿಕ ಅಂಶಗಳೇ. ಆದ್ದರಿಂದಾಗಿ ಈ ಸಂಶೋಧನಾ ವಿಷಯದಲ್ಲಿ ಸಾಮಾಜಿಕ ಮತ್ತು ಆರ್ಥಿಕ ವಿಷಯಗಳಿಗೆ ಪ್ರಧಾನ್ಯತೆಯನ್ನು ನೀಡಲಾಗಿದೆ.

ಇನ್ನು ಈ ಸಂಶೋಧನಾ ವಿಷಯವನ್ನು ಅಂತರ್‌ಶಿಸ್ತೀಯವಾಗಿ ಅಭ್ಯಾಸಿಸಲಾಗಿದೆ. ಸಾಹಿತ್ಯೇತರರೊಬ್ಬರು ಸಾಹಿತ್ಯದಲ್ಲಿ ಅಡಗಿರುವ ಸಾಮಾಜಿಕ ಅಂಶಗಳನ್ನು, ಸಂಸ್ಥೆಗಳನ್ನು ಈ ಮೂಲಕ ಅಭ್ಯಾಸಿಸಿದ್ದಾರೆ. ಆ ಮೂಲಕ ಸಾಹಿತ್ಯದಲ್ಲಿ ಸುಪ್ತವಾಗಿ ಅಡಗಿರುವ ಚಿಂತನೆಗಳನ್ನು ಬಯಲಿಗೆ ತರುವ ಕಿರು ಪ್ರಯತ್ನವನ್ನು ಮಾಡಲಾಗಿದೆ.

## ಆಕರ ಗ್ರಂಥಗಳು

1. ಕುವೆಂಪು, ಕಾನೂರು ಹೆಗ್ಗಡತಿ, ಉದಯ ರವಿ ಪ್ರಕಾಶನ 1992

2. Joe Moran : INTERDISCIPLINARITY :
Simultaneaously published by Routledge 2007

## ಪರಾಮರ್ಶನ ಗ್ರಂಥಗಳು – ಗ್ರಂಥ ಋಣ


1. ಉದ್ದಂಡಯ್ಯ, ಕುವೆಂಪು ಕಥನ, ಅಧ್ಯಯನ ಮಂಡಲ, ಬೆಂಗಳೂರು 2004
2. ಕುವೆಂಪು, ಕಾನೂರು ಹೆಗ್ಗಡತಿ, ಉದಯ ರವಿ ಪ್ರಕಾಶನ 1992
3. –"–, ಮಲೆಗಳಲ್ಲಿ ಮದುಮಗಳು, ಉದಯರವಿ ಪ್ರಕಾಶನ 1967
4. –"–, ಆತ್ಮಶ್ರೀಗಾಗಿ ನಿರಂಕುಶ ಮತಿಗಳಾಗಿ, ಉದಯರವಿ ಪ್ರಕಾಶನ
5. ಕುವೆಂಪು, ನನ್ನ ದೇವರು ಸಣ್ಣ ಕಥೆಗಳು, ಉದಯರವಿ ಪ್ರಕಾಶನ
6. ಕಡಿದಾಳು ರಾಮಪ್ಪಗೌಡ ಎಸ್.: ಮಲೆನಾಡು ಶ್ರೀ ವೈಷ್ಣವ ನಾಮಧಾರಿ ಗೌಡ ಸಂಸ್ಕೃತಿ, ತೀರ್ಥಹಳ್ಳಿ, 1998.
7. ಗುರುಪಾದ ಮರಿಗುದ್ದಿ : ಕುವೆಂಪು ಕಾದಂಬರಿಗಳ ಸಾಂಸ್ಕೃತಿಕ ಅಧ್ಯಯನ, ಸಹ್ಯಾದ್ರಿ ಪ್ರಕಾಶನ, ಮೈಸೂರು 1989
8. ಬಡಿಗೇರ ಜಿ.ಎಲ್.: ಸಮಾಜ ಶಾಸ್ತ್ರ, ಸಂಗಮೇಶ್ವರ ಪ್ರಕಾಶನ 2000
9. ಮನುದೇವ್ ದೇವಂಗಿ ಎಂ : ಸ್ವಾತಂತ್ರ್ಯ ಸೇನಾನಿ ದೇವಂಗಿ ಮಾನಪ್ಪ ಕಾವ್ಯಾಲಯ, ಮೈಸೂರು 2005
10. ರಾಮಚಂದ್ರ ರಾವ್ ಎಸ್.ಕೆ., ವಿವಾಹ ಪದ್ಧತಿಗಳು.
11. ವೀಣಾ ಶಾಂತೇಶ್ವರ, ಎಸ್.ಬಿ. ಚಂದ್ರಮೋಹನ್, ಅನಿಕೇತನ:ಕರ್ನಾಟಕ ಸಾಹಿತ್ಯ ಅಕಾಡೆಮಿ 1993
12. ಶಂಕರ್ ರಾವ್ ಚ.ನ., ಭಾರತೀಯ ಸಮಾಜದ ಅಧ್ಯಯನ, ಜೈ ಭಾರತ್ ಪ್ರಕಾಶನ, ಮಂಗಳೂರು 2003
13. ಶಂಕರ್ ರಾವ್ ಚ.ನ., ಸಮಾಜ ಶಾಸ್ತ್ರ ಪ್ರವೇಶ, ಜೈ ಭಾರತ್ ಪ್ರಕಾಶನ, ಮಂಗಳೂರು 2003
14. ಶಿವಾರೆಡ್ಡಿ ಕೆ.ಸಿ. ಕನ್ನಡದ ಹಾಡು ಪಾಡು. ಅಧ್ಯಯನ ಮಂಡಲ ಬೆಂಗಳೂರು 2003
15. ಕೆ.ವಿ.ಸುಬ್ಬಣ್ಣ : ಕುವೆಂಪುಗೆ ಪುಟ್ಟ ಕನ್ನಡಿ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು.
16. Joe Moran : INTERDISCIPLINARITY : Simultaneaously published by Routledge 2007

